

# ಸಿದ್ಧಗಂಗಾ



ಸಂಪುಟ : ೩೯ ಆಗಸ್ಟ್ ೨೦೦೩ ಸಂಚಿಕೆ : ೮




ಆಗಸ್ಟ್ ೧೦ರಂದು ಉತ್ತರ ಪ್ರದೇಶದ ನೊಯಿಡಾದಲ್ಲಿ ನಡೆದ ಜೆಎಸ್‌ಎಸ್ ತಾಂತ್ರಿಕ ಶಿಕ್ಷಣ ಆಕಾಡೆಮಿ ಕಟ್ಟಡ ಸಂಕೀರ್ಣದ ಸಮರ್ಪಣೆ ಸಮಾರಂಭದಲ್ಲಿ ಭಾರತದ ರಾಷ್ಟ್ರಪತಿ ಘನತೆವೆತ್ತ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರಿಂದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಸಮ್ಮುಖದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಗೌರವ ಸಮರ್ಪಣೆ




ಶ್ರೀಮಠದಲ್ಲಿ ಏರ್ಪಡಿಸಿದ್ದ ೫೭ನೇ ಸ್ವಾತಂತ್ರ್ಯೋತ್ಸವ ಸಮಾರಂಭದಲ್ಲಿ ಜಿಲ್ಲಾಧಿಕಾರಿ ಶ್ರೀ ಮಲ್ಲಿಕಾರ್ಜುನ ಬಿ. ದ್ಯಾಬೇರಿ ಅವರು ಮಾತನಾಡುತ್ತಿರುವುದು



ಗಣಪತಿ ಗಣರಾಯ ಮತಿಕೊಡು ಮಾರಾಯ
ವಿದ್ಯೇಕ ಬುದ್ಧಿಕೊಡು ನಮಗ – ಗಣರಾಯ
ಉದ್ಧಾರ ಆದೇವ ನಿಮ್ಮಿಂದೊ.



ಮುಖಪುಟ

*ರಾಷ್ಟ್ರಪತಿಗಳಿಂದ ಪೂಜ್ಯ ಶ್ರೀಗಳವರಿಗೆ ಗೌರವ ಸಮರ್ಪಣೆ*
*ಶ್ರೀ ಮಠದಲ್ಲಿ ಸ್ವಾತಂತ್ರ್ಯೋತ್ಸವ*
*ವಿಘ್ನ ನಿವಾರಕ ಗಣೇಶ*


ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕರು
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೯ ಆಗಸ್ಟ್ ೨೦೦೩ ಸಂಚಿಕೆ : ೮


## ಒಳಪುಟಗಳಲ್ಲಿ .........




| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೬೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೫.೦೦ |



## ನೈತಿಕ ಶಿಕ್ಷಣ ....

"ಆಧುನಿಕತೆಯ ಹುಚ್ಚುಹೊಳೆಯಲ್ಲಿ ಕೊಚ್ಚಿಹೋಗುತ್ತಿರುವ ಮನುಷ್ಯನಿಗೆ ನೈತಿಕತೆ ಶಿಕ್ಷಣದ ಮೊದಲ ಪಾಠವಾಗಬೇಕು. ದಯೆ, ಅನುಕಂಪ, ಸೇವಾಮನೋಭಾವವನ್ನು ಕಲಿಸದ ಶಿಕ್ಷಣ ವ್ಯರ್ಥ" – ಎಂದವರು ಪರಮಪೂಜ್ಯ ಸಿದ್ಧಗಂಗಾ ಶ್ರೀಗಳವರು. ಸಂದರ್ಭ – ದಿನಾಂಕ : ೧.೮.೨೦೦೩ರಂದು ಉತ್ತರ ಪ್ರದೇಶದ ರಾಜ್ಯದ ನೊಯಿಡಾದಲ್ಲಿ ಜೆ.ಎಸ್.ಎಸ್. ತಾಂತ್ರಿಕ ಶಿಕ್ಷಣ ಅಕಾಡೆಮಿಯ ಕಟ್ಟಡಗಳ ಸಂಕೀರ್ಣವನ್ನು ಲೋಕಾರ್ಪಣ ಮಾಡಿದ ಸಮಾರಂಭದ ಅಧ್ಯಕ್ಷ ಪೀಠದಿಂದ. ಘನತೆವೆತ್ತ ರಾಷ್ಟ್ರಪತಿ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರು ಸಮಾರಂಭವನ್ನು ಉದ್ಘಾಟಿಸಿದ ಅವಿಸ್ಮರಣೀಯ ಸನ್ನಿವೇಶ. "ಸುಂದರ ಹೃದಯವುಳ್ಳವರು ಮಾತ್ರ ಸುಂದರ ದೇಶ ನಿರ್ಮಾಣ ಮಾಡಬಲ್ಲರು. ಯಾರನ್ನೂ ದ್ವೇಷಿಸದ ಮತ್ತು ಏನನ್ನೂ ಬಯಸದ ಹೃದಯ ಮಾತ್ರ ಸುಂದರವಾಗಿ ಇರಬಲ್ಲದು. ಹೃದಯ ಸೌಂದರ್ಯಕ್ಕೆ ಸಂಪತ್ತು ಅಧಿಕಾರದ ಅಗತ್ಯ ಇಲ್ಲ" – ಎಂದು ನುಡಿ ನೈವೇದ್ಯ ಮಾಡಿದ ಪೂಜ್ಯ ಶ್ರೀ ಸಿದ್ದೇಶ್ವರ ಸ್ವಾಮಿಗಳು ಶಿಕ್ಷಣ ಹೃದಯ ಸೌಂದರ್ಯಕ್ಕೆ ಮಾಧ್ಯಮವಾಗಬೇಕೆಂಬುದನ್ನು ಅನಾವರಣಗೊಳಿಸಿದ್ದಾರೆ. ಪ್ರೀತಿ, ಕರುಣೆಯ ಮೂಲಕ ಧರ್ಮಗಳ ಬೆಸುಗೆಗೆ ಕರೆ ನೀಡಿದವರು ರಾಷ್ಟ್ರಪತಿಗಳು.

ಸುತ್ತೂರು ಮಹಾಸಂಸ್ಥಾನದ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಕರ್ನಾಟಕದ ವೀರಶೈವ ಮಠಗಳು ಮಾಡುತ್ತಿರುವ ಶಿಕ್ಷಣ ಸೇವೆಯನ್ನು ರಾಜ್ಯದಾಚೆಗೂ ವಿಸ್ತರಿಸುತ್ತಿರುವ ಮಹಾಸಾಹಸಿಗಳು. ಕ್ರಾಂತದರ್ಶಿಗಳು, ಹೃದಯಶ್ರೀಮಂತಿಕೆಯುಳ್ಳ ತತ್ವಾಭಿಮಾನಿಗಳು, ಸಿದ್ಧಗಂಗಾಶ್ರೀಗಳವರಲ್ಲಿ ತಮ್ಮ ಆರಾಧ್ಯಗುರು ಲಿಂಗೈಕ್ಯ ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರನ್ನು ದರ್ಶಿಸುತ್ತಿರುವ ವಿನಯಸಂಪನ್ನ ಶ್ರೀಗಳು. ಪರಮಪೂಜ್ಯ ಶ್ರೀ ಶ್ರೀಗಳವರನ್ನು ಪ್ರೀತ್ಯಭಿಮಾನಗಳಿಂದ ದೆಹಲಿಯವರೆಗೆ ಪ್ರವಾಸ ಮಾಡಿಸಿದ ಗೌರವಾನ್ವಿತ ಪೂಜ್ಯರು. ಉತ್ತರ ಪ್ರದೇಶದ ರಾಜ್ಯಪಾಲ ಶ್ರೀ ವಿಷ್ಣುಕಾಂತ ಶಾಸ್ತ್ರಿಯವರು – ಮತ್ತಿತರ ಗಣ್ಯಾತೀತ ಗಣ್ಯರಿಗೆ ಶ್ರೀಗಳವರನ್ನು ಪರಿಚಯಿಸಿದ ಸೌಜನ್ಯಪವಿತ್ರರು ಸುತ್ತೂರು ಶ್ರೀಗಳು. ಉತ್ತರ ಪ್ರದೇಶದಲ್ಲಿ ಜೆ.ಎಸ್.ಎಸ್. ಶಿಕ್ಷಣ ಜ್ಯೋತಿಯನ್ನು ಬೆಳಗಿಸುತ್ತಿರುವ ಪರಮಪೂಜ್ಯ ಜಗದ್ಗುರುಗಳವರನ್ನು ಪ್ರಣಾಮ ಪೂರ್ವಕವಾಗಿ "ಸಿದ್ಧಗಂಗಾ" – ಅಭಿನಂದಿಸಲು ಆನಂದಿಸುತ್ತದೆ.

*ಅಭಿನಂದನೆ*

ಶ್ರೀಮಠದ ಹಳೆವಿದ್ಯಾರ್ಥಿಗಳು ಅಭಿಮಾನಿಗಳೂ ಆದ ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಎಲ್. ರೇವಣ್ಣಸಿದ್ಧಯ್ಯನವರನ್ನು, ಕರ್ನಾಟಕ ಸರ್ಕಾರ ಇತ್ತೀಚೆಗೆ ಪ್ರಾರಂಭಿಸಿದ 'ಅಕ್ಷರದಾಸೋಹ' ಯೋಜನೆಯ ಸಲಹೆಗಾರರನ್ನಾಗಿ ನೇಮಕ ಮಾಡಿದ್ದಕ್ಕಾಗಿ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರನ್ನು ವಂದಿಸುತ್ತ ಶ್ರೀ ಎಲ್. ರೇವಣಸಿದ್ಧಯ್ಯನವರಿಗೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ.

*ಶ್ರದ್ಧಾಂಜಲಿ*

ಶ್ರೀಮಠದ ಅಭಿಮಾನಿಗಳಾಗಿದ್ದ ರಾಜ್ಯ ಮಾಜಿ ಸಚಿವರೂ, ಜನತಾದಳದ ಧುರೀಣರು, ಜನಾನುರಾಗಿಗಳೂ ಆಗಿದ್ದ ಕೋಲಾರ ಜಿಲ್ಲೆ ವೇಮಗಲ್ ಕ್ಷೇತ್ರದ ಶಾಸಕರಾಗಿದ್ದ ಸನ್ಮಾನ್ಯ ಶ್ರೀ ಸಿ. ಬೈರೇಗೌಡರು ನಿಧನರಾದುದನ್ನು ತಿಳಿದು, ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರೂ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದ ವಿದ್ವಾನ್ ಶ್ರೀ ಶಿವಶಂಕರಯ್ಯನವರು ಇತ್ತೀಚೆಗೆ ಲಿಂಗೈಕ್ಯರಾದುದನ್ನು ತಿಳಿದು, ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ, ಬೆಂಗಳೂರು ಶ್ರೀ ಸಿದ್ಧಗಂಗಾ ಮಠದ ವಿದ್ಯಾರ್ಥಿ ಸಂಘದ ಶಾಖೆಯ ಕಾರ್ಯದರ್ಶಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಟಿ.ಬಿ. ವಿರೂಪಾಕ್ಷಯ್ಯನವರು ಶಿವೈಕ್ಯರಾದುದನ್ನು ತಿಳಿದು 'ಸಿದ್ಧಗಂಗಾ' ದಿವಂಗತರ ಆತ್ಮಕ್ಕೆ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

– ಸಂಪಾದಕ







## ಚೀಟಿ ವ್ಯವಹಾರ : ಸಾಮಾಜಿಕ ಪಿಡುಗು

ಗ್ರಾಮ, ಪಟ್ಟಣ, ನಗರಗಳಲ್ಲಿ ಇಂದು ನಡೆದಿರುವ ಚೀಟಿ ವ್ಯವಹಾರದಿಂದ ನೈತಿಕತೆಯ ಹರಾಜಾಗುತ್ತಿರುವುದನ್ನು ಗಂಭೀರವಾಗಿ ಚಿಂತಿಸುವವರೇ ಇಲ್ಲದಂತಾಗಿದೆ. ಯಾವ ಮಹಾ ಪುರುಷನು ಇದನ್ನು ಪ್ರಾರಂಭಿಸಿದನೋ ತಿಳಿಯದಾಗಿದೆ. ಚೀಟಿ ವ್ಯವಹಾರ ಹಣದ ದಂದೆ ಎಂಬುದು ಮಾತುಬಲ್ಲ ಮಗುವಿಗೂ ಗೊತ್ತಿರುವ ವಿಚಾರ. ಶೋಷಣೆಯ ರಾಜಮಾರ್ಗವಾದ ಚೀಟಿ ವ್ಯವಹಾರ ಮಾನವೀಯತೆಯನ್ನು ತುಳಿಯುತ್ತಿರುವ ಹೃದಯಹೀನ ಸಾಮಾಜಿಕ ಪಿಡುಗು. ಹತ್ತು ಮಂದಿ ಒಂದುಗೂಡಿದರೆ ಅಲ್ಲೊಂದು ಚೀಟಿ ದಂದೆಯ ಉದಯ. ನೂರು ರೂ. ಮೊತ್ತದ ಚೀಟಿಯಿಂದ ಮೊದಲುಗೊಂಡು ಲಕ್ಷ ಲಕ್ಷದವರೆಗೆ, ಅಷ್ಟೇಕೆ ಕೋಟಿ ರೂಗಳವರೆಗೆ ಅನಧಿಕೃತವಾಗಿ ಚೀಟಿ ನಡೆಯುತ್ತಿದೆ ಎಂದು ಕೇಳಿದ್ದೇವೆ. ಚೀಟಿ ತೆಗೆದುಕೊಳ್ಳುವವರು ಹರಾಜಿನಲ್ಲಿ ಸವಾಲು ಮಾಡುತ್ತಾರೆ. ಹತ್ತುಸಾವಿರದ ಚೀಟಿಯನ್ನು ಆರು ಸಾವಿರ ಬಿಟ್ಟು ತೆಗೆದುಕೊಳ್ಳುವವರಿದ್ದಾರೆ ಎಂದು ಕೇಳಿದ್ದೇವೆ. ಇದೆಂಥ ವ್ಯವಹಾರ. ಮನೆಹಾಳಾಗುವ ವ್ಯವಹಾರ. ಆರುಸಾವಿರ ಬಿಟ್ಟು ನಾಲ್ಕು ಸಾವಿರ ತೆಗೆದುಕೊಳ್ಳುವವನು ಕಟ್ಟಲಾರದೇ ನಿರ್ಗತಿಕನಾದ ಉದಾಹರಣೆಗಳು ಒಂದಲ್ಲ, ನೂರು ನೂರು ಇವೆ. ನಮ್ಮಲ್ಲಿಯೇ ಶಿಕ್ಷಣ ಸಂಸ್ಥೆಯೊಂದರಲ್ಲಿ ಅಟೆಂಡರ್ ಆದವನೊಬ್ಬ ಚೀಟಿ ವ್ಯವಹಾರದಲ್ಲಿ ತೊಡಗಿ ಪಡಬಾರದ ಕಷ್ಟಕ್ಕೊಳಗಾಗಿ ಲಕ್ಷಾಂತರ ರೂ.ಗಳ ಸಾಲಗಾರನಾಗಿ, ತಲೆತಪ್ಪಿಸಿಕೊಂಡು ತಿರುಗುವ ದುಸ್ಥಿತಿಗೆ ಬಂದುದನ್ನು ತಿಳಿದು ಸಂಸ್ಥೆಯ ವತಿಯಿಂದ ಅವನ ಕಷ್ಟ ಪರಿಹಾರಕ್ಕೆ ಮುಂದಾಗಬೇಕಾಯಿತು. ಚೀಟಿ ನಡೆಸುವವರನ್ನು ಏಜೆಂಟರುಗಳೆನ್ನುತ್ತಾರೆ. ಚೀಟಿಯಲ್ಲಿ ಅಂಥವರಿಗೆ ಕಮೀಷನ್ ಇರುತ್ತದೆ. ಅದರ ಆಸೆಗೊಳಗಾಗಿ ಹೆಣ್ಮಕ್ಕಳಾದಿಯಾಗಿ ಈ ವ್ಯವಹಾರದಲ್ಲಿ ತೊಡಗುತ್ತಾರೆ. ಚೀಟಿಯ ಸದಸ್ಯರು ಹಣ ಕಟ್ಟದೇ ಹೋದಾಗ ಈ ಏಜೆಂಟರುಗಳು ಜವಾಬ್ದಾರರಾಗುತ್ತಾರೆ. ಮೂರು ನಾಲ್ಕು ಸದಸ್ಯರು ಹಣ ಕಟ್ಟದೇ ಹೋದರೆ ಏಜೆಂಟರು ಕೈಯಲ್ಲಾಡಿಸಿಬಿಡುತ್ತಾರೆ. ಲಿಖಿತ ದಾಖಲೆಗಳೇನೂ ಇರುವುದಿಲ್ಲ. ಕೋರ್ಟು ಕಚೇರಿಗೆ ಹೋಗುವಂತಿಲ್ಲ. ಜಗಳಕ್ಕೆ ದಾರಿ, ಮಾರಾಮಾರಿ. ಕೆಲವು ಸಂದರ್ಭಗಳಲ್ಲಿ ಆತ್ಮಹತ್ಯೆ ಎಲ್ಲ ದುರಂತಕ್ಕೆ ಕಾರಣ. ಹಾರುವ ನೊಣಕ್ಕೆ ಆಸೆಪಡುವ ಹಾವಿನ ಬಾಯ ಕಪ್ಪೆಯ ಪರಿಸ್ಥಿತಿ. ಚೀಟಿ ವ್ಯವಹಾರ ಗ್ರಾಮ ಜೀವನದ ನೆಮ್ಮದಿಗೆ ಮಾರಕ; ರಾಷ್ಟ್ರದ ಅವನತಿಗೆ ಕಾರಣ.

❄

ಓಂ

# ಶ್ರೀ ಸಿದ್ಧಲಿಂಗೇಶ್ವರ ವಚನ

*ಐದೂರು ಹೊಲದಲ್ಲಿ ಕಟ್ಟಿಪಶುವನು*
*ಆರೂರ ಹೊಕ್ಕು ಅರಸಿಹೆನೆಂದು ಹೋದರೆ*
*ಮೂರು ಮನೆಯಲ್ಲಿ ಈರುಗಾರಾಗಲಾಗಿ*
*ಅರಸಬಂದಯ್ಯಗಳು ಸತ್ತು ಹೋದರಲ್ಲ!*
*ಅರಸುವ ಆರುಹೆ ತಾನೆಂದು ತಿಳಿಯಲು*
*ಮೂರಾರಕ್ಷರವಾಗಿ ತೋರುವ*
*ಮೂಲಾಕ್ಷರಾತ್ಮಕ ತಾನೇ ತಪ್ಪದೆಂಬೆನಯ್ಯಾ*
*ಮಹಾಲಿಂಗಗುರು ಶಿವ ಸಿದ್ದೇಶ್ವರ ಪ್ರಭುವೇ!*

**ಪಂ**ಚಭೂತಯುಕ್ತವಾದದ್ದು ಜೀವನೆಂಬುದು ಪಶು. ಪ್ರಪಂಚವೆಂಬುದು ಹೊಲ. ಆ ಜೀವ ಷಟ್‌ಸ್ಥಲಜ್ಞಾನ ಕ್ರಿಯಾಚರಣೆಯ ಅಪೇಕ್ಷೆಯಿಂದ ಕೂಡಿದೆ. ಅದು ಅಜ್ಞಾನಿಗಳಿಗೆ ಅಸಾಧ್ಯವಾದುದರಿಂದ ಹೊನ್ನು ಮಣ್ಣು ಹೆಣ್ಣೆಂಬ ಮೂರು ಮನೆಯಲ್ಲಿ ಗಾರುಗತ್ತಲೆಗೊಳಗಾಗಿ, ಷಟ್‌ಸ್ಥಲಜ್ಞಾನಕ್ರಿಯೆ ಪಡೆವೆನೆಂಬ ಅಹಂಕಾರದಿಂದಿರಲಾಗಿ, ಅದು ಕಾಣದೆ ಅಲಸಿಕೆಯಿಂದಾಗಿ ಪ್ರಪಂಚದಲ್ಲಿ ಹುಟ್ಟಿ ಜನನ ಮರಣ ಬಾಧೆಗೊಳಗಾಗಿ ಹೋದರು. ಹಾಗೆ ತಿಳಿಯುವ ವಿವೇಕಜ್ಞಾನವೆ ಪರಬ್ರಹ್ಮವೆಂದರಿತರೆ ತ್ರಿವಿಧ ಷಡ್ವಿಧ ಮಂತ್ರಸ್ವರೂಪನಾದ ಪ್ರಣವಲಿಂಗವಾಗಬಲ್ಲದು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

**ಶ್ರೀವಾಣಿ**

*ಅಶಿಸ್ತು ಎಲ್ಲಾ ಕಡೆ ವ್ಯಾಪಕವಾಗಿದೆ, ಶಿಸ್ತು ಕಡಿಮೆ, ಅದು ನಮ್ಮ ದೇಶದ ಸಂಸ್ಕೃತಿಗೆ ಕಳಂಕಪ್ರಾಯ. ಮಹೋನ್ನತ ಸ್ಥಾನಗಳಿಸಲು ಮಹತ್ತರ ಸಾಧನೆ ಅಗತ್ಯ. ಯಾವ ಜೀವನದಲ್ಲಿ ಶಿಸ್ತು ಅಗೋಚರ ಅಂಥ ಜೀವನ ಸಾಮಾನ್ಯವಾದ ಜೀವನ, ವ್ಯರ್ಥವಾದ ಜೀವನ.*

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನೀನೆ ತಾಯಿಯಾದೆ ನೀನೆ ತಂದೆಯಾದೆ
ನೀನೆ ದೈವವಾದೆ ಬೆಳಕಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನೆ ಬಂಧುವಾದೆ ನೀನೆ ಬಳಗವಾದೆ
ನೀನೆ ಧರ್ಮವಾದೆ ಬೆಳಕಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉದಯಾಸ್ತಮಾನಗಳು ನಿನ್ನ ಸ್ಮರಣೆಗಾಗಿ
ಬಳಸಿ ಬಯಲಾಗುವೆ ನನ್ನ ತಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಿರಿಗುಡ್ಡ ಮಲೆಕಾನು ರವಿ ಶಶಿ ತಾರೆಗಳ
ಬುವಿ ಬಾನು ತುಂಬಿರುವ ನನ್ನ ಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಿಕರಿಸಿ ಬೆಳೆಸೆನ್ನ ಬೇಡುವೆ ನಾ ನಿನ್ನ
ಸಿರಿಶಿಖರ ಶಿವಯೋಗ ಕಲಶವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನವು ಮಡಿಯಾಗುವುದು ಬಾಳು ಬೆಳಕಾಗುವುದು
ನೆನೆಯಲೊಡನೆ ತವಸಿರಿಚರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದ ಭಾರವನೆಲ್ಲ ಹೆಗಲಮೇಲೊತ್ತಿರುವ
ಜಗದ ಸೇವೆಯಲಿ ಹಣ್ಣಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಸಂಪನ್ನರ ಸಂಗ ಸಂಪಿಗೆ ತರುವೆ
ಜಂಗಮ ಪುಂಗವರ ಶಿವಬಿಲ್ವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯ ಕೈಲಾಸವ ಪಾವನವ ಮಾಡಿರುವ
ಕಾಯಕವೆ ಕೈಲಾಸವೆಂದರುಹುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಜವುಂಡನಿರ್ಮಳದ ಘನಗಂಧ ಸಿಂಧುವೆ
ಬೆಳಗುವ ಸೇವಾನೇಸರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ನುಡಿ ನಮನ

ಡಾ. ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳು
ಹಿರೇಮಠ, ತುಮಕೂರು

ಯುಗ ಯುಗದ ತಪಸ್ಸು ಬೀಡುಬಿಟ್ಟಿದೆ
ಇಲ್ಲಿ, ತಮ್ಮ ಸನ್ನಿಧಿಯಲ್ಲಿ
ಯುಗ ಯುಗಾದಿಗಳ ವರ್ಚಸ್ಸು ಗೂಡುಗಟ್ಟಿದೆ
ತಮ್ಮ ಪದ್ಮಪಾದಂಗಳಲ್ಲಿ, ಪಾದಪದ್ಮಂಗಳಲ್ಲಿ
ಓಜಸ್ಸು ತೇಜಸ್ಸುಗಳು ಮನೆ ಮಾಡಿಬಿಟ್ಟಿವೆ
ತಮ್ಮ ಕಾರುಣ್ಯ-ಕೈವಲ್ಯದಲ್ಲಿ, ಕೈವಲ್ಯ-ಕಾರುಣ್ಯದಲ್ಲಿ
ದಾಸೋಹದ ತವರುಮನೆ ತಾವು
ನಿರಾಶ್ರಿತರ ತಂಗುದಾಣ ತಾವು
ಆಶ್ರಿತರಿಗದು ತಾವು ಪಿತೃಸ್ವರೂಪಿ
ಅನಾಥರಿಗೆ ತಾವು ಮಾತೃಸ್ವರೂಪಿ
ಅನಾಥ ರಕ್ಷಣೆಯ ಭಗವಂತನ ಮಹಾಮಣಿಹದಲ್ಲಿ
ಭಗವಂತನ ಹೆಗಲಿಗೆ ಹೆಗಲು ಕೊಟ್ಟ
ತದ್ರೂಪಿ ಭಗವಂತ ತಾವು
ಸಿದ್ಧಗಂಗೆಯ ಶುದ್ಧ-ಪರಿಶುದ್ಧ ಪರಿಸರವನು
'ವಿದ್ಯಾರ್ಥಿ ಕಾಶಿ'ಯನ್ನಾಗಿ
ಪರಿವರ್ತಿಸಿದ ಮಹಂತ
ಕೀರ್ತಿ ತಮ್ಮದು ಅನಂತ !!
ವಿದ್ಯಾರ್ಥಿಗಳಿಗೆ ತೀರ್ಥವೂ ನೀವೇ
ಕ್ಷೇತ್ರವೂ ನೀವೇ
ಅದು ಕಾರಣ 'ವಿದ್ಯಾರ್ಥಿ-ತೀಥ',
'ವಿದ್ಯಾರ್ಥಿ ಕಾಶಿ' ಎಂಬ ಪದಗಳು
ಪರ್ಯಾಯವಾಗಿ
ಶೋಭಿಸುತಿಹವು ತಮ್ಮ ಸನ್ನಿಧಿಯಲ್ಲಿ
ಪರಿಶೋಭಿಸುತಿಹವು
ತಮ್ಮ ವ್ಯಕ್ತಿತ್ವವೆಂಬೀ ಪಾವನ ಸಿದ್ಧಗಂಗೆಯಲ್ಲಿ !!
ದಾಸೋಹ ತಮಗೆ ಗುರುವಲ್ಲ
ದಾಸೋಹಕೆ ತಾವು ಗುರು
ಆ ದಾಸೋಹವೇ ಶಿಷ್ಯನಂದದಿ
ಬಂದು ಪಾಠ ಕಲಿಯುತಿದೆ ಇಲ್ಲಿ
ತಮ್ಮ ಶ್ರೀ ಸನ್ನಿಧಾನದಲ್ಲಿ !!
ಯಾವ ರತ್ನವೇ ಆಗಲಿ
ಅದಾವ ಪಾರಿತೋಷಕವೇ ಆಗಲಿ
ತಮ್ಮ ತೂಗುವ, ತಮ್ಮನಳೆವ ಸಾಮರ್ಥ್ಯ ಸಾಲದು ಅವಕೆ
ಈ ಕಾರಣವೋ ಏನೋ
ಅವು ತಮ್ಮಿಂದ ದೂರದಲ್ಲಿಯೇ ನಿಂದು
ತಮ್ಮ 'ಹತಭಾಗ್ಯ'ವನು. 'ಆಹತ ಭಾಗ್ಯ'ವನು
ನಿಂದಿಸಿಕೊಳುತಿವೆ !!
ಕಾಣದಾ ಕೈಲಾಸದ ಗೊಡವೆ ನಮಗೇಕೆಂದು
'ಕಾಯಕವೇ ದಾಸೋಹ'
'ದಾಸೋಹವೇ ಕಾಯಕ'
ಎಂದು ಸಾರಿ ಹೇಳಿದ
ಅನುಭಾವಿ ಸಾರ್ವಭೌಮರು ತಾವು !!
ತಾವು ರಾಜ್ಯ ಸರಕಾರವೂ ಅಲ್ಲ,
ತಾವು ಕೇಂದ್ರ, ಸರಕಾರವೂ ಅಲ್ಲ,
ಆದರೂ ಅದಾವ ಸರಕಾರಕ್ಕಿದೆ
ತಮ್ಮ 'ತಾಯಿ ಸರಕಾರ'ದ
ಎದುರಿನೊಳು
ಕತ್ತೆತ್ತಿ ನಿಲ್ಲುವ ಆ ತಾಕತ್ತು?
ತಾವೇ ಒಂದು ಸರಕಾರ
ತಾವು ಮನುಕುಲ ಬಂಧು
ಮಾನವತಾ ಧರ್ಮ ಸಿಂಧು
ಸ್ವತಂತ್ರ ಸಿದ್ಧೇಶ್ವರನ 'ತಾಯಿ ಸರಕಾರ' ತಾವು !!
ಕಾಡಿ ಬೇಡಿದ್ದನೆಲ್ಲ ಕೊಡುವ
ಆ ಕಲ್ಪನೆಯ ಕಾಮಧೇನುವಲ್ಲ,
ಆ ಕನಸಿನ ಕಲ್ಪತರುವಲ್ಲ ತಾವು
ದೀನ ದಲಿತ ಅನಾಥ, ಅರಕ್ಷಿತ ಜಗಕೆ
ಬೇಕು ಬೇಕಾದ್ದನ್ನು ಕೊಡುವ
ಜೀವಂತ ಕಾಮಧೇನು
ಸಜೀವ ಕಲ್ಪತರು ತಾವು
ಆ ಕಾಮ ಆ ಕಲ್ಪಂಗಳೆಲ್ಲ ಸ್ವಯಂ ನಿವೃತ್ತಿಯನು
ಘೋಷಿಸಿಕೊಂಡಿವೆ
ತಮ್ಮ ನಾಮ, ಸಂಕಲ್ಪಗಳನು ಕೇಳಿ !!
ತಮಗೆ ತೊಂಬತ್ತಾರು ಆದರೂ ತಾವು ವೃದ್ಧರಲ್ಲ
ವೃದ್ಧಾಪ್ಯವದು ತಮ್ಮ ಬಳಿ ಬರಲು
ಅಂಜುತಿದೆ, ಅಳುಕುತಿದೆ
ಮುನಿ ಮಾರ್ಕಂಡೇಯನ ಬಳಿ ಸಾರಿ ಫಜೀತಿಗಿಟ್ಟುಕೊಂಡ
ಆ ಮೃತ್ಯು-ದೇವತೆಯ ನೆನಪಿಸಿಕೊಂಡು
ಗುರು ಶಿವಕುಮಾರ 'ಸಿದ್ಧಶ್ರೀ'
'ಶುದ್ಧಶ್ರೀ'ಯ ಬಳಿ ಸಾರಿದರೆ
ತನಗದೆಂಥ ಫಜೀತಿ ಕಾದಿದೆ
ಎಂಬಳುಕು, ಆತಂಕಗಳದಕ್ಕೆ !!
ತಮ್ಮ ದರುಶನವದು
ಶತಕೋಟಿ ದೇವತೆಗಳ ದರುಶನಕದು ಸಾಟಿ
ತಮ್ಮ ಪಾದಸ್ಪರ್ಶವದು
ಭರತ ಭೂಮಿಯ ಎಲ್ಲ
ಕ್ಷೇತ್ರ ತೀರ್ಥಯಾತ್ರೆಗಳಿಗದು ಸರಿಮಿಗಿಲು
ತಮ್ಮ ಪಾದೋದಕದೊಳು
ಸರ್ವ ತೀರ್ಥಗಳ ಪುಣ್ಯವದು
ಮನೆಮಾಡಿಕೊಂಡಿಹುದಿಲ್ಲಿ
ತಮ್ಮ ಗುರುತ್ವದ ಸನ್ನಿಧಾನದಲ್ಲಿ !!
ಈ ಶತಮಾನವೇ ತನ್ನನ್ನು ತಾನು
ಅಭಿನಂದಿಸಿಕೊಳುತಿದೆ
ತಮ್ಮ ವ್ಯಕ್ತಿತ್ವದ ಸಾಹಚರ್ಯ
ಸಾನಿಧ್ಯಗಳನೊಳಗೊಂಡ
ಅದು ತಾನು 'ಧನ್ಯ ಧನ್ಯ' ಎಂದು !!
ತಮ್ಮ ಬಣ್ಣನೆಗೆ 'ನನ್ನ ಮೊದಲ ಬಳಸಿ
ತನ್ನ ಮೊದಲ ಬಳಸಿ' ಎಂದು
ಶಬ್ದಗಳವು ಪರಸ್ಪರ ಪೈಪೋಟಿಗಿಳಿಯುತಿಹವು
'ಸಿದ್ಧಶ್ರೀ' ಚೇತನದ ವ್ಯಕ್ತಿತ್ವದೆತ್ತರಕೆ
ಹಣೆ ಮಣಿದು
'ಹಿರೇಮಠದ ಶಿವಾನಂದಶ್ರೀ'
ತನ್ನ ಭಕ್ತಿ-ಸುಮನಗಳನು ಅರ್ಪಿಸುತ
ಸಂತಸಿಸುತಿಹುದು ಇಲ್ಲಿ
ಸಿದ್ಧಗಂಗೆಯ ಈ ಪವಿತ್ರ ಪರಿಶುದ್ಧ ದಿವ್ಯ ಸನ್ನಿಧಿಯಲ್ಲಿ !!



# ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ಇಂದ್ರಿಯ ನಿಗ್ರಹವ ಮಾಡಿದರೆ*
*ಹೊಂದುವವು ದೋಷಂಗಳು !*
*ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು !*
*ಸತಿ-ಪತಿ-ರತಿ-ಸುಖವ ಬಿಟ್ಟರೆ ಸಿರಿಯಾಳ ಚೆಂಗಳೆಯರು?*
*ಸತಿ-ಪತಿ-ರತಿ-ಸುಖಭೋಗೋಪಭೋಗವಿಳಾಸವ*
*ಬಿಟ್ಟನೇ ಸಿಂಧು ಬಲ್ಲಾಳನು?*
*ನಿಮ್ಮ ಮುಟ್ಟಿ ಪರಧನ-ಪರಸತಿಯರಿಗೆಳಸಿದರೆ*
*ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವನ !*

ಸಂಸಾರವು ತ್ಯಾಜ್ಯವಲ್ಲ. ಇಂದ್ರಿಯಗಳ ಸಹಜೋಚಿತ ಪ್ರವೃತ್ತಿಗಳನ್ನು ತೀರ ತಡೆಗಟ್ಟಿದರೆ ಅವು ಮತ್ತೆಲ್ಲಿಯೋ ಕಟ್ಟೆಯೊಡೆದು ಮನೆ ಮಠಗಳನ್ನು ಮುಳುಗಿಸಿ, ಪೈರು ಪಚ್ಚೆಯನ್ನು ಕೊಚ್ಚಿ, ನಮ್ಮನ್ನು ಕಡು ಕಷ್ಟಕ್ಕೀಡುಮಾಡುವವು. ಕೆರೆಯುಳಿದು ನೀರು ನಿಂತಿರಬೇಕಾದರೆ ಕೋಡಿ ತೆರೆದಿರಬೇಕು! ಹಾಗೆಯೇ, ಎಲ್ಲ ಧರ್ಮಕಾರ್ಯಗಳಿಗೂ ಸಾಧನರೂಪವಾದ ಈ ದೇಹ ಅಚ್ಚುಕಟ್ಟಾಗಿದ್ದು, ಪ್ರಸನ್ನತೆ ನೆಲೆಗೊಂಡು, ಜೀವನ ಹಸನಾಗಬೇಕಾದರೆ, ಪಂಚೇಂದ್ರಿಗಳ ಪರಿಷ್ಕೃತಕಾಮನೆಗಳ ವಿರುದ್ಧ ಹೋರಾಡಿ ತೀರ ನಿರೋಧಮಾಡುವುದು ಬೇಡ. ಇನ್ನೊಬ್ಬರ ಗಂಟಿಗೆ ಗುಣಾಕಾರ ಹಾಕದೆ, ಕಾಯಕದಿಂದಾರ್ಜಿಸಿದ ಸ್ವಂತಧನವ್ಯಯದಿಂದ ಸುಖಪಟ್ಟರೇನು ತಪ್ಪು? ಕಂಡವರ ಹೆಣ್ಣಿಗೆ ಕಣ್ಣುಹಾಕದೆ, ದೈವಸಾಕ್ಷಿಯಲ್ಲಿ ಕೈ ಹಿಡಿದ ಮನದನ್ನೆಮಡದಿಯೊಡನೆ ಸೊಗ ಬಾಳಿದರೇನು ತಪ್ಪು? ಸಿರಿಯಾಳ ಚೆಂಗಳೆಯರೆಂಬ ಶಿವಶರಣದಂಪತಿಗಳು ತಮ್ಮ ಸಂಸಾರದ ಪ್ರಿಯತಮಫಲವನ್ನು ಶಿವಾರ್ಪಿತಮಾಡಿ ಶಿವನಿಗೆ ಹತ್ತಿರವಾಗಲಿಲ್ಲವೆ? ಭೋಗ ಭಾಗ್ಯಗಳಲ್ಲಿ ಬಲ್ಲಿನಾದ ಸಿಂಧುಬಲ್ಲಾಳನು ತನ್ನ ಮಾನಾಭಿಮಾನದ ತೊಟ್ಟನ್ನು ಕತ್ತರಿಸಿ ಶಿವನಿಗೆ ಅರ್ಪಿಸಿ ಸುಖಿಸಿ, ಶಿವಸಾಯುಜ್ಯವನ್ನು ಸಾಧಿಸಲಿಲ್ಲವೆ? ಹಾಗಾದಲ್ಲಿ ಭೋಗದಲ್ಲಿ ಬಾಧಕವಾದುದೇನೂ ಇಲ್ಲ.

*ಪಾಪಿಯಧನ ಪ್ರಾಯಶ್ಚಿತ್ತಕ್ಕಲ್ಲದೆ*
*ಸತ್ಪಾತ್ರಕ್ಕೆ ಸಲ್ಲದಯ್ಯ !*
*ನಾಯ ಹಾಲು ನಾಯಿಗಲ್ಲದೆ*
*ಪಂಚಾಮೃತಕ್ಕೆ ಸಲ್ಲದಯ್ಯ !*
*ನಮ್ಮ ಕೂಡಲಸಂಗನ ಶರಣರಿಗಲ್ಲದ*
*ಅರ್ಥ ವ್ಯರ್ಥ ಕಂಡಯ್ಯ*

ಪಾಪಿಯೆಂಬವನೊಂದು ನಾಯಿ, ಪಾಪಮಾಡಿ ಕೂಡಿಟ್ಟ ಅವನ ಹಣ – ಮರಿಹಾಕಿದ ನಾಯಿ ತನ್ನ ಕೆಚ್ಚಲಲ್ಲಿ ತುಂಬಿಕೊಂಡ ಹಾಲು. ಅದೆಲ್ಲ ತನ್ನ ದುರ್ವ್ಯವಹಾರದ ಗರ್ಭದಿಂದಿಳಿದ ಹಲವಾರು ಪಾಪಸಂತಾನದ ಪಾಲಲ್ಲದೆ ಶಿವಮಜ್ಜನಕ್ಕಲ್ಲ. ಸಜ್ಜನ ಸಂತೋಷಕ್ಕಲ್ಲ.

ಜನ ಪಾಪದಿಂದ ಧನವನ್ನು ಆರ್ಜಿಸುವುದೇಕೆ? ಹಾಗೆ ಆರ್ಜಿಸಿದ ಧನವನ್ನೆಲ್ಲಾ ಅದೇ ಪಾಪಪರಿಹಾರಕಪ್ರಾಯಶ್ಚಿತ್ತಕ್ಕೆಂದು ವಂಚಕ ಪುರೋಹಿತ ಪರಿವಾರಕ್ಕೆ ಹಂಚುವದೇಕೆ? ಹಾವನ್ನು ಹೊಡೆದು ಹದ್ದಿಗೆ ಹಾಕುವ ಜಗದ ಈ ತಿಳಿಗೇಡಿ ನಡೆವಳಿಯನ್ನು ತೆಗಳಿರುವರು ಬಸವಣ್ಣನವರು.

ಮತ್ತು ಪಾಪಿಯು ತನ್ನ ಪಾಪವನ್ನು ಕಳೆದುಕೊಳ್ಳಲೆಂದು, ಪ್ರಾಯಶ್ಚಿತ್ತಕ್ಕಾಗಿ ಹಣವನ್ನು ಪೋಲುಮಾಡುವುದು ವ್ಯರ್ಥ. ಪಾಪಪರಿಹಾರಕ್ಕೆಂದು – ಲೋಕಸೇವೆಗಲ್ಲದೆ ಮತ್ತಿತರಕ್ಕೆ ಮಾಡಿದ ವ್ಯಯ ಅಪವ್ಯಯ. ಮೇಲಾಗಿ ಪಾಪಾರ್ಜಿತವಾದುದನ್ನು ಸ್ವೀರಿಸಲು ಶರಣರು ಒಲ್ಲರು. ಆದುದರಿಂದ ಮೊದಲನೆಯದಾಗಿ, ನಮ್ಮ ಅರ್ಥವು ಧರ್ಮದ ಆಧಾರದ ಮೇಲೆ ಆರ್ಜಿಸಿದುದಾಗಿರಬೇಕು. ಎರಡನೆಯದಾಗಿ, ಆ ಧರ್ಮಧನವನ್ನು ಸತ್ಪಾತ್ರಕ್ಕೆ ಸಲ್ಲಿಸಬೇಕು. ಅಂಥವನೇ ನೈಜ ಶ್ರೀಮಂತ, ಅವನೇ ಆತ್ಮ ಶ್ರೀಯುತ.

*ಉಂಬ ಬಟ್ಟಲು ಬೇರೆ ಕಂಚಲ್ಲ !*
*ನೋಡುವ ದರ್ಪಣ ಬೇರೆ ಕಂಚಲ್ಲ !*
*ಭಾಂಡ ಒಂದೇ, ಭಾಜನ ಒಂದೇ !*
*ಬೆಳಗೆ ಕನ್ನಡಿ ಎನಿಸಿತ್ತಯ್ಯ !*
*ಅರಿದರೆ ಶರಣನು ! ಮರೆದರೆ ಮಾನವನು !*
*ಮರೆಯದೆ ಪೂಜಿಸಿ ನಮ್ಮ ಕೂಡಲಸಂಗಯ್ಯನ !*

ಉಣ್ಣುವ ಬಟ್ಟಲಿಗೆ ಬಳಸಿಕ ಕಂಚೇ ಬೇರೆಯಲ್ಲ. ನೋಡುವ ಕನ್ನಡಿಗೆ ಬಳಸಿದ ಕಂಚೇ ಬೇರೆಯಲ್ಲ! ಎರಡರ ಸತ್ವ-ಸಾಮಗ್ರಿಯೂ ಒಂದೇ. ಆದರೆ ಕಂಚು ಹೇಗಿದ್ದರೂ ಉಣ್ಣುವುದಕ್ಕೆ ಬಂದೀತು. ಯಾರಾದರೂ ಅದನ್ನು ತಮ್ಮ ಉದರಕಾರ್ಯಕ್ಕೆ ಬಳಸಿ ಮೂಲೆಗೊತ್ತರಿಸಿ ಇಡಬಹುದು. ಆದರೆ ತಮ್ಮ ಅಂದ-ಚಂದವನ್ನು ನೋಡಿಕೊಂಡು ಓರೆಕೋರೆಗಳನ್ನು ತಿದ್ದಿಕೊಳ್ಳಲನುವಾಗುವ ಕಂಚಾದರೋ ಕನ್ನಡಿಯಾಗಬೇಕಾದರೆ – ಕೊಳೆಯನ್ನೆಲ್ಲಾ ತೆಗೆದು ಚನ್ನಾಗಿ ಬೆಳಗಿರಬೇಕು, ಒಪ್ಪವಾಗಿರಬೇಕು, ಉಬ್ಬು ತಗ್ಗುಗಳಿಲ್ಲದೆ ಸಮತಲವಾಗಿರಬೇಕು, ಥಳಥಳಿಸುತ್ತಿರಬೇಕು – ಅದಕ್ಕೆ ಬೇಕಾದ ಅರ್ಹತೆಗಳು ಅನೇಕ !

ಹಾಗೆಯೇ ಮಾನವರೆಲ್ಲರಿಗಿರುವ ದೇಹ-ಜೀವ-ಆತ್ಮಗಳು ಒಂದೇ. ಹೀನಮಾನವನು ತನ್ನ ದೇಹ-ಜೀವ-ಆತ್ಮಗಳನ್ನು ಸಂಸ್ಕರಿಸಿಕೊಳ್ಳದಿದ್ದರೂ ಸಾಗೀತು. ಏಕೆಂದರೆ ಅವನು ತನ್ನ ಕಸುವು- ಕರ್ತವ್ಯಗಳನ್ನು ಮರೆತವನು, ನಿತ್ಯನೀರಸಜೀವನ ನಿರತ, ತುಚ್ಛ ಸುಖ ಸಂತೃಪ್ತ! ಆದರೆ ಅನ್ಯರಿಗೆ ಆದರ್ಶವಾಗಬೇಕಾದ ದೇವಮಾನವ ಶರಣನಾದರೋ ದೇವರನ್ನು ಮರೆಯದೆ, ದೇವರ ನೆಲೆಗೆ ನಿಲುಕುವ ಉದಾತ್ತವಾದ ನಿಲುವನ್ನು ಹೊಂದಬೇಕೆಂಬುದನ್ನರಿತು, ಧಾತುಶುದ್ಧಿಯನ್ನೂ ಸಮಧಾತುವನ್ನೂ ಸರ್ವಾಂಗಪ್ರಭೆಯನ್ನೂ ಅಳವಡಿಸಿಕೊಂಡವನು. ಮಾನವನ ಮರೆವಿಗೂ, ಶರಣನ ಅರಿವಿಗೂ ಎಷ್ಟು ಅಂತರ? ಪ್ರಪಾತ- ಗೌರೀಶಂಕರಗಳ ಮಹದಂತರ !

ಎಲ್ಲರಲ್ಲೂ ಎಲ್ಲ ಶಕ್ತಿಗಳೂ ನಿಹಿತವಾಗಿವೆ. ಆದರೆ ಅವನ್ನು ವಿಹಿತವಾಗಿ ಬೆಳೆಸಿಕೊಳ್ಳುವ ಸಾಧನೆ-ಸಿದ್ಧಿಗಳೇ ಸಾಮಾನ್ಯನನ್ನೂ ಶರಣನನ್ನೂ ಬೇರ್ಪಡಿಸುವ ಅಂಶಗಳು.

*(ಕೃಪೆ : ಬಸವ ವಚನಾಮೃತ)*







# ಭಾರತ ಸ್ವಾತಂತ್ರ್ಯೋತ್ಸವ

– ಗೊ.ರು. ಚನ್ನಬಸಪ್ಪ
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು.

**ಭಾ**ರತ ಸ್ವಾತಂತ್ರ್ಯ ಹೋರಾಟ ಜಗತ್ತಿನ ಇತಿಹಾಸದಲ್ಲೇ ಒಂದು ಅದ್ಭುತ ಘಟನೆ. ಆ ಹೋರಾಟದ ನೆನಪೇ ಒಂದು ಸ್ಫೂರ್ತಿಯ ಕಿರಣ.



ಭಾರತದ ಮಾನವ ಲೋಕದ ಪುರಾತನ ಬೀಡು. ಪ್ರಾಚೀನ ಕಾಲದಿಂದ ವಿಶ್ವಕ್ಕೆ ಆಧ್ಯಾತ್ಮಿಕ ಮೌಲ್ಯದ ಅಮೃತ ಸಂದೇಶ ನೀಡುತ್ತ ಬಂದಿರುವ ಧರ್ಮಭೂಮಿ. ಶತಶತಮಾನಗಳ ಸಂಸ್ಕೃತಿಯ ಸಂಸ್ಕಾರದೊಡನೆ ರೂಪುಗೊಂಡ ರಸಪೂರ್ಣ ಜೀವನ ಭಾರತೀಯರದು.

ಭಾರತ ಭೌಗೋಳಿಕವಾಗಿ, ಪದ್ಧತಿ – ಪರಂಪರೆಗಳಿಂದಾಗಿ, ಹಂಗಾಮು-ಹವಾಮಾನಗಳಿಂದ ವೈವಿಧ್ಯದ ನೆಲ, ಹೌದು. ಆದರೆ ಆ ವೈವಿಧ್ಯತೆಯ ಮಧ್ಯೆ ಅಸದೃಶವಾದ ಏಕತಾನತೆ ಇಲ್ಲಿನ ವೈಶಿಷ್ಟ್ಯ.

ಇಂತಹ ಅನನ್ಯ ಹಿನ್ನೆಲೆಯನ್ನು ಪಡೆದ ಭಾರತ ದಾಸ್ಯಕ್ಕೆ ಒಳಗಾದುದು ಒಂದು ವಿಪರ್ಯಾಸ. ಕಾಲದ ಕೈತವಕ್ಕೆ ಸಿಕ್ಕಿ ವಿದೇಶಿಯರ ಕುತಂತ್ರಕ್ಕೆ ಬಲಿಯಾದುದು ಒಂದು ಕಹಿ ಪ್ರಸಂಗ.

ಸಮೃದ್ಧ ಭಾರತದ ಮೇಲೆ ಸಾಮ್ರಾಜ್ಯಶಾಹಿಗಳು ಕಣ್ಣು ಹಾಕಿದ ಕಥೆ ಕ್ರಿಸ್ತಪೂರ್ವ ೫೦೦ನೆಯ ವರ್ಷದಷ್ಟು ಹಿಂದಕ್ಕೆ ಹೋಗುತ್ತದೆ. ದರ್ಶಕನೆಂಬ ರಾಜ ಮಗಧ ರಾಜ್ಯ ಆಳುತ್ತಿದ್ದಾಗ ಇರಾನದ ಡೇರಿಯಸ್ ಹಿಂದೂಸ್ಥಾನದ ಮೇಲೆ ದಾಳಿ ನಡೆಸಿದ. ಕ್ರಿ.ಪೂ. ೩೨೭ರಲ್ಲಿ ಅಲೆಕ್ಸಾಂಡರ್ ಪ್ರವೇಶಿಸಿದ. ಆನಂತರ ಹೂಣರು, ಕುಶಾನರು, ಶಕರು, ಯವನರು ಆಗಿಂದಾಗ ದಾಳಿ ನಡೆಸುತ್ತಲೇ ಬಂದರು.

ಆದರೆ ಭಾರತವು ಪರಕೀಯ ಆಡಳಿತದ ಪೂರ್ಣ ಬಿಸಿಯನ್ನು ಅನುಭವಿಸಿದ್ದು ಬ್ರಿಟಿಷರ ಆಡಳಿತದಲ್ಲಿ. ನಮಗೆಲ್ಲ ತಿಳಿದಂತೆ ಬ್ರಿಟಿಷರೇನೂ ತಮ್ಮ ತೋಳ್ಬಲದಿಂದ ಈ ಭಾರತವನ್ನು ಗೆಲ್ಲಲಿಲ್ಲ. ವ್ಯಾಪಾರದ ನೆಪದ ಮೇಲೆ ಬಂದ ಜನ ನಮ್ಮ ವ್ಯವಹಾರದಲ್ಲಿ ಕೈ ಹಾಕಿದರು. ವಾಣಿಜ್ಯ ಕಂಪನಿಯೊಂದು ವಿಶಾಲ


ಮಂಡ್ಯ ಜಿಲ್ಲೆಯ ಶಿವಪುರದ ಧ್ವಜ ಸತ್ಯಾಗ್ರಹ ಸ್ಮಾರಕ ಭವನ

ಭಾರತ ಸ್ವಾತಂತ್ರ್ಯೇತಿಹಾಸವನ್ನು ಗಮನಿಸಿದಾಗ ಮೊದಲು ಸ್ಥಳೀಯವಾಗಿದ್ದ ಹೋರಾಟಕ್ಕೆ ಸಂಘಟನೆಯ ಸಾರ್ವತ್ರಿಕ ಸ್ವರೂಪ ಬಂದದ್ದು ೧೮೫೭ರಲ್ಲಿ ನಡೆದ ದಂಗೆಯ ನಂತರ. ಅಲ್ಲಿಂದ ಮುಂದೆ ನಡೆದ ಹೋರಾಟ ಒಂದು ರೋಮಾಂಚಕಾರಿ ಚರಿತ್ರೆ.

೧೮೮೫ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ರೂಪುಗೊಂಡ ಮೇಲೆ ಸ್ವಾತಂತ್ರ್ಯ ಹೋರಾಟದ ಸ್ವರೂಪ ಮತ್ತಷ್ಟು ಬದಲಾಯಿಸಿತು. ಸಮಗ್ರ ಭಾರತದ ಜೀವನ ವಾಹಿನಿಯೇ ಸ್ವಾತಂತ್ರ್ಯ ಗೀತೆ ಹಾಡತೊಡಗಿತು.

ಆ ನಂತರ ಬ್ರಿಟಿಷ್ ಆಳರಸರು ತಮ್ಮ ಕುತಂತ್ರಕ್ಕೆ ಮತ್ತಷ್ಟು ಚಾಲನೆ ಕೊಟ್ಟರು. ಆಯಕಟ್ಟು ನೋಡಿಕೊಂಡು ನಮ್ಮನ್ನು ಒಡೆದು ಆಳಲಾರಂಭಿಸಿದರು. ನಮ್ಮ ದೇಶದ ಕೆಲವು ದೌರ್ಬಲ್ಯಗಳೂ ಅವರ ರಾಜಕೀಯಕ್ಕೆ ಅನ್ನ ಒದಗಿಸಿದವು.

ಆದರೂ ಬಾಲಗಂಗಾಧರ ತಿಲಕ್, ಗೋಪಾಲ ಕೃಷ್ಣ ಗೋಖಲೆ, ಮಹದೇವ ಗೋವಿಂದ ರಾನಡೆ, ಮದನ ಮೋಹನ ಮಾಳವೀಯ, ಲಾಲಾ ಲಜಪತರಾಯ್, ದಾದಾಬಾಯಿ ನವರೋಜಿ, ಮೊದಲಾದ ದೇಶಭಕ್ತರು ಭಾರತವನ್ನು ಆಳಿತು. ಬ್ರಿಟಿಷರು ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದ್ದು ಇಲ್ಲಿಗೆ ಸರಿಯಾಗಿ ೨೫೦ ವರ್ಷಗಳ ಹಿಂದೆ.

ಅವರ ಚಲನವಲನಗಳು ವಾಸ್ತವವಾಗಿ ಭಾರತೀಯರಲ್ಲಿ ಒಂದು ರೀತಿಯ ಜಾಗೃತಿಯನ್ನು ಉಂಟುಮಾಡಿದವೆಂದು ಹೇಳಬಹುದು. ಸರಿ, ಅಲ್ಲಲ್ಲಿ ಸ್ಥಳೀಯವಾಗಿ ಪ್ರತಿರೋಧ ಆರಂಭವಾಯಿತು. ಬ್ರಿಟಿಷರ ಆಳ್ವಿಕೆಯ ಆರಂಭದಲ್ಲಿ ಅಂತಹ ಪ್ರತಿರೋಧ ತಳೆದು ಹೋರಾಡಿ ಮೊದಲಿಗರಲ್ಲಿ ಕರ್ನಾಟಕದ ಹೈದರ್-ಟಿಪ್ಪೂ ಸುಲ್ತಾನರು ಮತ್ತು ವೀರರಾಣಿ ಕಿತ್ತೂರು ಚನ್ನಮ್ಮ ಇದ್ದಾರೆಂಬುದು ಕನ್ನಡಿಗರ ಹೆಮ್ಮೆ.


ಬಾಲಗಂಗಾಧರ ತಿಲಕ್


ಗೋಪಾಲಕೃಷ್ಣ ಗೋಖಲೆ


ಸರ್ದಾರ್ ವಲ್ಲಭಾಯಿ ಪಟೇಲ್


ಲಾಲಾ ರಜಪತರಾಯ್






ವೀರ ಸಾವರ್ಕರ್


ಸುಭಾಷ್‌ಚಂದ್ರಬೋಸ್


ಜವಹರ್‌ಲಾಲ್ ನೆಹರು


ಲಾಲ್‌ಬಹದ್ದೂರ್ ಶಾಸ್ತ್ರಿ

ರಾಷ್ಟ್ರಪುರುಷನನ್ನು ಹೊಡೆದೆಬ್ಬಿಸಿದರು. ಭಾರತ ಜನಕೋಟಿಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ಪ್ರಜ್ವಲಗೊಳಿಸಿದ ಮಹಾತ್ಮ ಗಾಂಧಿಯಂತೂ ಈ ಯುಗ ಮರೆಯಲಾಗದ ಮಹಾಶಕ್ತಿ !

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಸಾವಿರ ಸಾವಿರ ಸ್ಮರಣೀಯ ಘಟನೆಗಳು ನಡೆದಿವೆ. ಅವುಗಳಲ್ಲಿ ನಮ್ಮ ಗುಡ್ಡಗಾಡುಗಳಲ್ಲಿ ನಡೆದ ಹೋರಾಟಗಳಂತೂ ಸ್ಮರಣೀಯ. ರಾಂಪಾಗುಡಂ, ಬಸ್ತಾರ್, ಕೊಂಡ, ಮಯೂರ್‌ಭಂಜ್, ಬರ್ಸಾಮುಂಡ, ತಾನಾಭಗತ್, ಮಣಿಪುರ, ಬಿಲ್, ಮೊರ್ಲಿ ಮೊದಲಾದ ಪ್ರತಿರೋಧಗಳು ಅಸಾಮಾನ್ಯವಾದವು.

ಭಾರತ ಸ್ವಾತಂತ್ರ್ಯ ಸಾಧನೆಗೆ ಅಲಿಘರ್, ಅಸ್ಸಾಂ, ಬಿಹಾರ, ಬಂಗಾಳ, ಗುಜರಾತ್ ಚಳುವಳಿಗಳು, ಬಾರ್ಡೋಲಿ, ಚಂಪಾರಣ್ಯ, ರೌಲತ್ ಸತ್ಯಾಗ್ರಹಗಳು, ದಂಡಿಯಾತ್ರೆ, ಉಪ್ಪಿನ ಸತ್ಯಾಗ್ರಹ ಮತ್ತು ಧ್ವಜಸತ್ಯಾಗ್ರಹಗಳು, ರೈತ ಚಳುವಳಿಗಳು ಹೀಗೆ ಸಹಸ್ರಾರು ಸಂಘಟನೆಗಳು ತಮ್ಮ ಪಾಲಿನ ಕಾಣಿಕೆ ಸಲ್ಲಿಸಿವೆ.

ಹಾಗೆಯೇ, ಯಂಗ್ ಇಂಡಿಯಾ, ಆಗಸ್ಟ್ ಬೇಡಿಕೆ, 'ವಂದೇ ಮಾತರಂ' ಗೀತೆ, ಸ್ವದೇಶಿ ಚಳುವಳಿ, ಅಸಹಕಾರ ಚಳುವಳಿ, ವಿದೇಶಿ ಬಹಿಷ್ಕಾರ, ಗೋಸಂರಕ್ಷಣೆ, ಮಹಾರಾಷ್ಟ್ರದ ಗಣಪತಿ ಉತ್ಸವ, ಗಿರಣಿ ಕಾಮಗಾರ ಸಂಘಟನೆ, ನೌಜವಾನ್ ಭಾರತ್ ಸಭಾ, ಪ್ರಾರ್ಥನಾ ಸಮಾಜ, ಪ್ರಜಾಚಳುವಳಿ, ಆತ್ಮಗೌರವ ಚಳುವಳಿ, ಪ್ರಗತಿಪರ ಬರಹಗಾರರ ಸಂಘ – ಇಂತಹ ಸಂಘಟನೆಗಳ ಕೊಡುಗೆಯೇನೂ ಸಾಮಾನ್ಯವಾದುದಲ್ಲ.

ಇನ್ನು ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕ ತನ್ನದೇ ಆದ ಕಾಣಿಕೆ ಸಲ್ಲಿಸಿದೆ.

ಕರ್ನಾಟಕದಲ್ಲಿ ಅಸಹಕಾರ ಚಳುವಳಿ ಮೊದಲು ಆರಂಭವಾದದ್ದು ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ-ಸಿದ್ಧಾಪುರದ ಅರಣ್ಯ ಸತ್ಯಾಗ್ರಹದ ಮೂಲಕ.

೧೯೨೦ರಲ್ಲಿ ನಡೆದ ನಾಗಪುರ ಕಾಂಗ್ರೆಸ್ ಅಧಿವೇಶನಕ್ಕೆ ಕರ್ನಾಟಕದಿಂದ ೮೦೦ ಪ್ರತಿನಿಧಿಗಳು ಹೋಗಿದ್ದಾರೆ.

ಕರ್ನಾಟಕದ ಮೂಲೆ ಮೂಲೆಯಲ್ಲಿ ನಡೆದ ಅಹಿಂಸಾತ್ಮಕ ಹೋರಾಟಗಳಲ್ಲಿ ಇಲ್ಲಿ ಸ್ಮರಣೆ ಮಾಡಿಕೊಳ್ಳುವ ಮೂರು ಘಟನೆಗಳೆಂದರೆ ಒಂದು ಉತ್ತರ ಕನ್ನಡ ಜಿಲ್ಲೆಯ ಅಂಕೋಲ; ಇನ್ನೊಂದು ಕೋಲಾರ ಜಿಲ್ಲೆಯ ವಿದುರಾಶ್ವತ್ಥ, ಮತ್ತೊಂದು ಮಂಡ್ಯ ಜಿಲ್ಲೆಯ ಶಿವಪುರ.

ಸುಪ್ರಸಿದ್ಧ ದಂಡಿ ಸತ್ಯಾಗ್ರಹವಾದ ಒಂದು ವಾರದಲ್ಲಿ ಕರ್ನಾಟಕದಲ್ಲಿ ನಡೆದ ಪ್ರಮುಖ ಘಟನೆಯೆಂದರೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ-ಉಪ್ಪಿನ ಸತ್ಯಾಗ್ರಹ. ೧೯೩೦ರ ಏಪ್ರಿಲ್ ೧೩ರಂದು ಸುಮಾರು ೩೦೦೦೦ಕ್ಕೂ ಹೆಚ್ಚು ಜನ ಅಂಕೋಲೆಯ ಬಳಿ ಪೂಜಗೇರಿಯಲ್ಲಿ ಸೇರಿತ್ತು. ಈ ಸತ್ಯಾಗ್ರಹ ಸತತವಾಗಿ ೪೫ ದಿನಗಳ ಕಾಲ ನಡೆಯಿತು. ಬ್ರಿಟಿಷರ ಉಪ್ಪಿನ ಶಾಸನವನ್ನು ಉಲ್ಲಂಘಿಸಿ ಅಂಕೋಲೆಯಲ್ಲಿ ಉಪ್ಪಿನ ಸಂತೆಯನ್ನೇ ನಡೆಸಿದ್ದು ಭಾರತದಲ್ಲೇ ವಿಶಿಷ್ಟವಾದ ದಾಖಲೆಯಾಗಿತ್ತು. ಈ ಸತ್ಯಾಗ್ರಹದಲ್ಲಿ ಬಂಧನಕ್ಕೊಳಗಾದ ಮೊದಲಿಗರು ಎಂ.ಪಿ. ನಾಡಕರ್ಣಿ ಮತ್ತು ಸ್ವಾಮಿ ವಿವೇಕಾನಂದ ಅವರು.

ದಿನಾಂಕ ೧೦.೪.೧೯೩೮ರಲ್ಲಿ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಶಿವಪುರದ ಬಳಿ ನಡೆದ ಧ್ವಜ ಸತ್ಯಾಗ್ರಹ ಕರ್ನಾಟಕದ ಸ್ವಾತಂತ್ರ್ಯ ಹೋರಾಟದ ಇನ್ನೊಂದು ದಾಖಲೆ. ಆಗಿನ ಮೈಸೂರು ಸರಕಾರದ ನಿಷೇಧಾಜ್ಞೆಯನ್ನು ಧಿಕ್ಕರಿಸಿ ಶಿವಪುರದಲ್ಲಿ ರಾಜ್ಯಮಟ್ಟದ ಕಾಂಗ್ರೆಸ್ ಅಧಿವೇಶನ ನಡೆಸಲಾಯಿತು. ಹೆಚ್.ಕೆ. ವೀರಣ್ಣಗೌಡರು ನೇತೃತ್ವ ವಹಿಸಿದ್ದರು. ಮೊದಲ ದಿನ ಧ್ವಜಾರೋಹಣ ಮಾಡಿದ ಟಿ. ಸಿದ್ಧಲಿಂಗಯ್ಯನವರನ್ನು ಬಂಧಿಸಲಾಯಿತು. ಎರಡು ವಾರಗಳ ಕಾಲ ನಡೆದ ಈ ಧ್ವಜ ಸತ್ಯಾಗ್ರಹದಲ್ಲಿ ಅನೇಕ ಜನ ಬಂಧನಕ್ಕೊಳಗಾದರು.

ರಾಜ್ಯದಲ್ಲಿ ನಡೆದ ಅತ್ಯಂತ ದುರಂತ ಘಟನೆಯೆಂದರೆ ಕೋಲಾರ ಜಿಲ್ಲಾ ಗೌರಿಬಿದನೂರು ತಾಲ್ಲೂಕು ವಿದುರಾಶ್ವತ್ಥದಲ್ಲಿ.

೧೯೩೮ರ ಏಪ್ರಿಲ್ ೨೫ರಂದು ವಿದುರಾಶ್ವತ್ಥದಲ್ಲಿ ಸ್ಥಳೀಯ ದೇವರ ಜಾತ್ರೆ. ಜಾತ್ರೆಗೆ ಬಂದಿದ್ದ ಸಹಸ್ರ ಸಹಸ್ರ ಜನ ಅಲ್ಲಿ ಪ್ರದೇಶ್ ಕಾಂಗ್ರೆಸ್ ಏರ್ಪಡಿಸಿದ್ದ ಸಾರ್ವಜನಿಕ ಸಭೆಯಲ್ಲಿ ಪಾಲುಗೊಂಡಿತು. ಆ ಬೃಹತ್ ಸಂಘಟನೆಯನ್ನು ಚದುರಿಸಲು ಪೊಲೀಸರು ೯೨ ಸುತ್ತು ಗುಂಡು ಹಾರಿಸಿದರು. ಸುಮಾರ ೩೫-೪೦ ಜನ ಗುಂಡಿಗೆ ಬಲಿಯಾದರು; ನೂರಾರು ಜನ ಗಾಯಗೊಂಡರು. ಅನೇಕ ಜನ ಬಂಧನಕ್ಕೆ ಒಳಗಾದರು.

ಅದುವರೆಗೆ ಮೈಸೂರು ಮಹಾರಾಜರ ಆಡಳಿತದ ಬಗ್ಗೆ ಸಮಾಧಾನ ಹೊಂದಿದ್ದ ಗಾಂಧೀಜಿಯವರು, ವಿದುರಾಶ್ವತ್ಥದ ಘಟನೆ ಕೇಳಿ, ಮಹದೇವ ದೇಸಾಯಿ ಮತ್ತು ಆಚಾರ್ಯ ಕೃಪಲಾನಿಯವರನ್ನು ಮೈಸೂರಿಗೆ ಕಳುಹಿಸಿ ಖುದ್ದು ಮಾಹಿತಿ ಪಡೆದರು. ಆಗ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರು ಕೃಪಲಾನಿ ಅವರೊಂದಿಗೆ ಒಂದು ಒಪ್ಪಂದಕ್ಕೆ ಬಂದರು. ಮೈಸೂರು ಧ್ವಜದೊಂದಿಗೆ ರಾಷ್ಟ್ರೀಯ ತ್ರಿವರ್ಣ ಧ್ವಜವನ್ನು ಹಾರಿಸಲು ಒಪ್ಪಿಕೊಂಡರು.

ಕರ್ನಾಟಕದ ಶಿವಮೊಗ್ಗ ಜಿಲ್ಲಾ ಈಸೂರಿನಲ್ಲಿ ನಡೆದ ಘಟನೆಯೂ ಅಷ್ಟೇ ದುರಂತಕರ. ಸ್ವಾತಂತ್ರ್ಯದ ಬೆಂಕಿಯೊಡನೆ ಸರಸವಾಡಿದ ಕೆಲವು ಅಧಿಕಾರಿಗಳು ಆ ಬೆಂಕಿಯಲೇ ಭಸ್ಮವಾಗಬೇಕಾಯಿತು. ಆದರೆ ಹಳ್ಳಿಯ ೫ ಜನ ಗಲ್ಲಿಗೇರಿದರು.

ಹೀಗೆ ಭಾರತ ತನ್ನ ನಿರಂತರ ಹೋರಾಟದಲ್ಲಿ ಸ್ವಾತಂತ್ರ್ಯ ಗಳಿಸಿತು. ೧೯೪೭ನೇ ಆಗಸ್ಟ್ ೧೫ ಭಾರತದ ಇತಿಹಾಸದಲ್ಲಿ ಸ್ಮರಣೀಯ ದಿನ. ಅಷ್ಟೇ ಏಕೆ, ಇಡೀ ವಿಶ್ವದ ಇತಿಹಾಸದಲ್ಲೇ ಭಾರತದಂತಹ ಬೃಹತ್ ರಾಷ್ಟ್ರ ಅಹಿಂಸಾತ್ಮಕ ಹೋರಾಟದಿಂದ ಸ್ವತಂತ್ರ ಗಳಿಸಿದ್ದು ಅದೇ ಮೊದಲು.

ಕವಿವಾಣಿ ಹೇಳುವಂತೆ –

*ಅಸ್ಥಿಪಂಜರಗಳಲಿ ಮತ್ತೆ ಚೇತನ ತುಂಬಿಕೊಂಡಿತು.*
*ಆತ್ಮಗೌರವ ಹೊಮ್ಮಿ ಬಂದಿತು.*
*ಮಣ್ಣ ದೇಹಿಗಳೆಲ್ಲ ವಜ್ರದೇಹಿಗಳಾಗಿ ಹೋರಾಡಿ*
*ಮಾತೃಭೂಮಿಯ ಸೇವೆ ಸಲ್ಲಿಸಿದರು.*

ಯುಗದ ಮಹಾಚೇತನವಾಗಿ ಎದ್ದುನಿಂತ ಮಹಾತ್ಮಗಾಂಧಿ ರಾಷ್ಟ್ರಕ್ಕೆ ಬಂದ ಸ್ವಾತಂತ್ರ್ಯಕ್ಕೆ ಒಂದು ಅರ್ಥ ಕೊಡಬೇಕೆನ್ನುವಷ್ಟರಲ್ಲೇ ನಮ್ಮಿಂದ ದೂರವಾದುದು ದುರಾದೃಷ್ಟಕರ.


ಭಗತ್‌ಸಿಂಗ್


ಸರೋಜಿನಿ ನಾಯ್ಡು


ಕಿತ್ತೂರು ರಾಣಿ ಚನ್ನಮ್ಮ


ಎಸ್. ನಿಜಲಿಂಗಪ್ಪ





## ಸಂಗೊಳ್ಳಿ ರಾಯಣ್ಣ



ಸ್ವಾತಂತ್ರ್ಯ ಹೋರಾಟಕ್ಕೆ ಜನಪದೀಯರ ಕೊಡುಗೆಯ ಮಾತು ಬಂದಾಗ ನಮ್ಮ ಕಣ್ಣೆದುರಿಗೆ ಪ್ರಧಾನವಾಗಿ ನಿಲ್ಲುವ ಒಂದು ಹಿಮಾಲಯ ಸದೃಶ ಹೆಸರು ಸಂಗೊಳ್ಳಿ ರಾಯಣ್ಣ. ಅವನ ವೀರಕಳೆ ನಾಡಿನ ಮನೆಮಾತು. ಅವನನ್ನು ಕುರಿತು ನಮ್ಮ ಜನಪದ ನೂರಾರು ಹಾಡುಕಟ್ಟಿ ಹಾಡಿದೆ. ೧೯೨೪ರಲ್ಲಿ ಬ್ರಿಟಿಷರನ್ನೆದುರಿಸಿದ ವೀರರಾಣಿ ಕಿತ್ತೂರು ಚನ್ನಮ್ಮನ ನಚ್ಚಿನ ಭಂಟನಾಗಿ ಅವನು ಮಾಡಿದ ಸಾಹಸ ಅಸದೃಶವಾದುದು. ಅವನ ಬಗ್ಗೆ ಲಾವಣಿ ಕಟ್ಟಿ ಹಾಡಿರುವ ಆಧುನಿಕ ಲಾವಣಿಕಾರ ಹುಲಕುಂದದ ಭೀಮಕವಿ –

*''ಏ ಸಿಂಹದಂತ ಸಂಗೊಳ್ಳಿ ರಾಯ*
*ಭೂಮಿಗಿ ಬಿದ್ದಂಗ ಸೂರ್ಯನ ಛಾಯಾ''*
*''ಹಡಿಯಬೇಕು ಇಂತಹ ಮಕ್ಕಳನ ಭೂಮಿ ಮ್ಯಾಗ*
*ಕೆಚ್ಚೆದೆಯ ಕರ್ಣನಂತವನ ರಣದಾಗ''*

ಎನ್ನುತ್ತಾನೆ. ರಾಯಣ್ಣನ ಬಗ್ಗೆ ಅವನ ಸಮಕಾಲೀನರು ಎನ್ನಲಾಗಿರುವ ಹೆಬ್ಬಳ್ಳಿಬಸವರು, ಶಾಹಿರ್ ಶಾಮರಾವ್, ಮೋದಿನ ಸಾಲ್ ಮತ್ತು ಚಿಕ್ಕನಂದಿಯ ಓರ್ವ ಅಜ್ಞಾತ ಕವಿ ಲಾವಣಿ ರಚಿಸಿದ್ದಾರೆ.



ಮಹಾಕವಿ ಕುವೆಂಪು ಹೇಳುವಂತೆ –

*ರಾಷ್ಟ್ರಪಿತ ದಿವಂಗತ, ಉನ್ಮತ್ತ ಹಸ್ತಹತ*
*ನರಹೃದಯದ ವಿಷವಾರ್ಧಿಗೆ ಜೀವಾಮೃತ ಸಮರ್ಪಿತ*
*ಕ್ಷಮಿಸು ಓ ಜಗತ್ಪಿತ, ಅದೃಷ್ಟಹೀನ ಭಾರತ !*

ಆದರೆ ಬಾಪುವಿನ ಆದರ್ಶದ ಸ್ವತಂತ್ರ ಭಾರತ ನಿರ್ಮಾಣದಲ್ಲಿ ನಾವು ನಡೆಯಬೇಕಾದ ದಾರಿಯ ದೂರ ಇನ್ನೂ ಇದೆ.

ಭಾರತ ಸ್ವಾತಂತ್ರ್ಯ ಮರಳ ರಾಶಿಯ ಮೇಲೆ ನಿಲ್ಲಿಸಿದ ಮನ ಮಣ್ಣಿನ ಮನೆಯಲ್ಲ; ತ್ಯಾಗ ಬಲಿದಾನಗಳ ವಜ್ರಗಾರೆಯ ಮೇಲೆ ನಿರ್ಮಿಸಿರುವ ಭದ್ರ ಕೋಟೆ. ೫೭ನೆಯ ಸ್ವಾತಂತ್ರ್ಯೋತ್ಸವ ಆಚರಿಸುತ್ತಿರುವ ನಾವು ನಮ್ಮ ಹಿರಿಯರು ಪಟ್ಟ ಶ್ರಮ, ಮಾಡಿದ ತ್ಯಾಗ, ಅನುಭವಿಸಿದ ನೋವುಗಳನ್ನು ಮರೆಯಬಾರದು. ಅಂತಹ ನೆನಪು ನಮ್ಮ ಮುಂದಿನ ಹಾದಿಯನ್ನು ಕಂಡುಕೊಳ್ಳಲು ನೆರವಾದೀತು.

ಸ್ವಾತಂತ್ರ್ಯವನ್ನು ಗಳಿಸಲು ನಡೆಸಿದ ಹೋರಾಟಕ್ಕಿಂತಲೂ ಅದನ್ನು ಉಳಿಸಿಕೊಳ್ಳಲು ಹೆಚ್ಚಿನ ಹೋರಾಟ ಬೇಕಾಗುತ್ತದೆ. ಏಕೆಂದರೆ 'ಸ್ವಾತಂತ್ರ್ಯ' ಎನ್ನುವುದು ಅನುಪಮವಾದ, ಅಮೂಲ್ಯವಾದ 'ಜೀವರತ್ನ'.

'ನಾಡ ಮಕ್ಕಳ ಗಂಟಲೊತ್ತಿಕ್ಕಿ, ಮಾನವೀಯತೆಗೆ ಗುಂಡಿಕ್ಕಿ, ಗಹಗಹಿಸಿ ನಕ್ಕ ಬ್ರಿಟಿಷ್ ಸಾಮ್ರಾಜ್ಯಶಾಹಿ ರಕ್ಕಸನನ್ನು ಹೆಡಮುರಿ ಬಿಗಿದು ಕುಕ್ಕರಿಸಿದ' ದಿಟ್ಟತನ ಇಂದು ನವಭಾರತ ನಿರ್ಮಾಣದಲ್ಲೂ ತೊಡಗಬೇಕಾಗಿದೆ. ನಮ್ಮ ನರನರವೂ ಹೊಸ ನೆತ್ತರಿನ ತುತ್ತೂರಿಯನ್ನು ನುಡಿಸಬೇಕಾಗಿದೆ !

★

# ಚೆನ್ನಬಸವಣ್ಣನವರ ಒಂದು ವಚನ : ವಿಶ್ಲೇಷಣೆ

– ಬಿ. ಮಹಾದೇವಪ್ಪ
ಸಾಹಿತಿಗಳು

*"ಉಂಟೆಂಬುದ ಬಸವಣ್ಣ ಕೊಂಡ*
*ಅಲ್ಲವೆಂಬುದ ಅಲ್ಲಮಪ್ರಭು ಕೊಂಡ*
*ಇನ್ನಾರನಹುದೆಂಬೆನು, ಇನ್ನಾರನಲ್ಲವೆಂಬನು*
*ಇವರಿಬ್ಬರು ಛಲಸಂಪನ್ನರಾದರಲ್ಲದೆ*
*ಲಿಂಗ ಸಂಪನ್ನರ ಕಾಣೆ ಕೂಡಲಸಂಗಮದೇವಾ !*

– ಚೆನ್ನಬಸವಣ್ಣನವರು

ಸಂಸ್ಕಾರದಂತೆ ಮನೋಪ್ರವೃತ್ತಿ ಬೆಳೆಯುತ್ತದೆ, ಮನೋಪ್ರವೃತ್ತಿಗನುಗುಣವಾಗಿ ನಮ್ಮ ಆಚಾರವಳವಡುತ್ತದೆ, ನಮ್ಮ ಆಚಾರ-ವಿಚಾರಗಳ ಮೇಲೆ ವ್ಯಕ್ತಿತ್ವ ನಿರ್ಭರವಾಗುತ್ತದೆ. ಒಬ್ಬರು ಸಹಜವಾಗಿಯೇ ಆಶಾವಾದಿಗಳಾಗಬಹುದು, ಒಬ್ಬರು ಸಹಜವಾಗಿಯೇ ನಿರಾಶಾವಾದಿಗಳಾಗಬಹುದು. ಒಬ್ಬರು ಶೀಘ್ರಕೋಪಿಗಳಾಗಬಹುದು. ಮತ್ತೊಬ್ಬರು ಸ್ಥಿರಸಹನಶೀಲರಾಗಬಹುದು. ಪ್ರಸ್ತುತ ವಚನದಲ್ಲಿ ಮಹಾಜ್ಞಾನಿ ಚೆನ್ನಬಸವಣ್ಣನವರು ಮಹಾನುಭಾವರಾದ ಬಸವಣ್ಣನವರ ಅಂತರಂಗವನ್ನೂ, ಶೂನ್ಯ ಸಿಂಹಾಸನಾಧೀಶ ಅಲ್ಲಮಪ್ರಭುಗಳ ಅಂತರಂಗವನ್ನೂ ತೂಗಿನೋಡಿ ಯಾರದು ಸೈ ಎಂದು ಹೇಗೆ ಹೇಳಬೇಕು, ಯಾರದು ತಪ್ಪು ಎಂದು ಹೇಗೆ ಹೇಳಬೇಕು ಎಂಬುದನ್ನು ಸೂಕ್ಷ್ಮಗ್ರಾಹಿಯಾಗಿ ವಿಶ್ಲೇಷಿಸುತ್ತಿರುವರು.



ಗುರುಲಿಂಗ ಜಂಗಮದಲ್ಲಿ ಭಕ್ತಿಯುಳ್ಳವರಾದ ಬಸವಣ್ಣನವರಿಗೆ ಯಾರಲ್ಲಿಯೂ ಕೊರತೆ ಕಾಣುತ್ತಿರಲಿಲ್ಲ, ಮಿಕ್ಕವರೆಲ್ಲರೂ ದೊಡ್ಡವರು ತಾನೇ ಸಣ್ಣವನೆಂದು ಭಾವಿಸಿದವರಿಗೆ ಮತ್ತೊಬ್ಬರಲ್ಲಿ ಲೋಪವಾದರೂ ಎಂತು ಕಂಡೀತು? ಮತ್ತೊಬ್ಬರು ಸರ್ವಗುಣ ಸಂಪನ್ನರೆಂದೇ ಭಾವಿಸಿಕೊಳ್ಳುತ್ತಿದ್ದರು. ಅವರಲ್ಲಿ ಜ್ಞಾನವಿದೆ, ಭಕ್ತಿ ಇದೆ, ವೈರಾಗ್ಯವಿದೆ, ವಿವೇಕವಿದೆ. ಶಾಂತತೆ ಇದೆ, ಸತ್ಯವಿದೆಯೆಂದು ತಿಳಿದು ಎಂಥವರನ್ನು ಗೌರವಿಸುತ್ತಿದ್ದರು. ಇದಕ್ಕೆ ವಿರುದ್ಧವಾಗಿ ಪರಿಪೂರ್ಣರಾಗಿದ್ದ ಅಲ್ಲಮಪ್ರಭುಗಳಿಗೆ ಪ್ರತಿಯೊಬ್ಬರಲ್ಲಿಯೂ ದೋಷಗಳೇ ಕಣ್ಣಿಗೆ ರಾಚುತ್ತಿದ್ದವು. ವೈರಾಗ್ಯದ ಸಾಕಾರಮೂರ್ತಿಯಂತಿದ್ದ ಮಹಾದೇವಿಯಕ್ಕಗಳನ್ನೂ ಅವರು ಒರೆಗೆ ಹಚ್ಚದೆ ಒಪ್ಪಿಕೊಂಡವರಲ್ಲ, ಜ್ಞಾನದ ಮಹಿಳಾಮೂರ್ತಿಯಂತಿದ್ದ ಮುಕ್ತಾಯಕ್ಕನನ್ನು ಜ್ಞಾನದ ಹಾದಿಗೆ ಹಚ್ಚಲು ಹೋದವರು ಅವರು. ಯಾರಲ್ಲಿಯೂ ಸದಮಲಜ್ಞಾನವಿಲ್ಲ, ನಿಷ್ಕಲ್ಮಶ ಭಕ್ತಿಯಿಲ್ಲ, ಅಖಂಡ ವೈರಾಗ್ಯವಿಲ್ಲ, ಸದಸದ್ವಿವೇಕವಿಲ್ಲ, ನಿರುಮ್ಮಳ ಶಾಂತಿಯಿಲ್ಲ, ನಿಶ್ಚಲ ಸತ್ಯತೆಯಿಲ್ಲ ಎಂದು ಹಂಬಲಿಸುವವರು ಅಲ್ಲಮಪ್ರಭುಗಳು. ಇವರಿಬ್ಬರಲ್ಲಿ ಯಾರ ಮಾರ್ಗ ಸರಿ ಎಂದು ಹೇಳಬೇಕು, ಯಾರ ಮಾರ್ಗ ತಪ್ಪು ಎಂದು ಹೇಳಬೇಕು. ಬಂದ ಬಿಕ್ಕಟ್ಟೇನೆಂದರೆ ಉಭಯರೂ ತಮ್ಮ ತಮ್ಮ ಮಾರ್ಗದಲ್ಲಿ ಅಚಲರಾಗಿದ್ದರೂ ಬಸವಣ್ಣನವರ ಮಾರ್ಗಕ್ಕೆ ಅಲ್ಲಮಪ್ರಭುಗಳು ಬರಲು ತಯಾರಿಲ್ಲ, ಅಲ್ಲಮ ಪ್ರಭುಗಳ ಮಾರ್ಗಕ್ಕೆ ಬಸವಣ್ಣನವರು ಬರಲು ಸಿದ್ಧರಿರಲಿಲ್ಲ. ಹೀಗಾಗಿ ಅವರು ಛಲಸಂಪನ್ನರಲ್ಲದೆ ಲಿಂಗಸಂಪನ್ನರಲ್ಲ ಎಂಬ ಅಭಿಪ್ರಾಯಕ್ಕೆ ಚೆನ್ನಬಸವಣ್ಣನವರು ಬರಬೇಕಾಯಿತು. ಹೀಗೆ ಹೇಳುವಲ್ಲಿ ಚೆನ್ನಬಸವಣ್ಣನವರು ಬಸವ-ಅಲ್ಲಮರಿಗಿಂತ ಎತ್ತರದಲ್ಲಿದ್ದರು ಎಂದು ಹೇಳಲಿಕ್ಕಾಗುವುದಿಲ್ಲ. ಅದು ಅವರವರ ವೈಯಕ್ತಿಕ ಅಭಿಪ್ರಾಯ.





ನಮ್ಮ ಕಲ್ಯಾಣದ ಶಿವಶರಣರ ಒಂದು ವೈಶಿಷ್ಟ್ಯವೆಂದರೆ ಅವರು ತಮ್ಮ ಆತ್ಮಸಾಕ್ಷಿಗೆ ಪ್ರಾಮಾಣಿಕರಾಗಿದ್ದು ಹೃದಯಕ್ಕೆ ವೇದ್ಯವಾದದ್ದನ್ನು ನಿರ್ಭಯದಿಂದ ಹೇಳುತ್ತಿದ್ದರು. ಭಿಡೆ ಮುರುವತ್ತುಗಳಿಗೆ ಒಳಗಾದವರಲ್ಲ, ಬಸವಣ್ಣನವರು ತಮ್ಮ ಸೋದರ ಮಾವನೆಂದು ಚೆನ್ನಬಸವಣ್ಣ ನಂಟು ಭಕ್ತಿ ತೋರಿದವರಲ್ಲ, ಅಲ್ಲಮಪ್ರಭುಗಳು ಶೂನ್ಯ ಸಿಂಹಾಸನಾಧಿಪತಿಗಳು ಎಂದು ಪದವಿ ಪಕ್ಷಪಾತ ಬೀರಿದವರಲ್ಲ. ಇಬ್ಬರೂ ಸಮೀಪ ಬರಬೇಕೆಂಬುದೇ ಚೆನ್ನವಸವಣ್ಣನವರ ಕಾತರ.

ಆದರೆ ಏನು ಮಾಡುವುದು ! ಮನೋಪ್ರವೃತ್ತಿಯೆಂಬುದು ವ್ಯಕ್ತಿತ್ವ ನಿರ್ಮಾಣಕ್ಕೆ ತನ್ನ ಪ್ರಭಾವ ಬೀರೇಬಿರುತ್ತದಲ್ಲ ! ಒಂದೇ ಘಟನೆಯನ್ನು ಆಶಾವಾದಿ ಒಂದು ರೀತಿ ತೆಗೆದುಕೊಳ್ಳುತ್ತಾನೆ. ನಿರಾಶಾವಾದಿ ಇನ್ನೊಂದು ರೀತಿ ತೆಗೆದುಕೊಳ್ಳುತ್ತಾನೆ. ಆಶಾವಾದಿಯಾದವನು ಹೆಂಡತಿಯಂತೂ ಸತ್ತಳು, ಮಗುವಾದರೂ ಉಳಿಯಿತಲ್ಲಾ ಎಂದು ಸಮಾಧಾನ ಪಟ್ಟುಕೊಳ್ಳುತ್ತಾನೆ. ನಿರಾಶಾವಾದಿಯಾದವನು ಇದೇ ಘಟನೆಯನ್ನು ಅಯ್ಯೋ ಮಗು ಉಳಿದರೇನಾಯಿತು ಹೆಂಡತಿ ಸತ್ತಳಲ್ಲ ಎಂದು ರೋಧಿಸುತ್ತಾನೆ. ೧೦ ಸಾವಿರ ಖರ್ಚು ಮಾಡಿದ್ದಕ್ಕೆ ಹತ್ತು ಚೀಲವಾದರೂ ತೊಗರಿಯಾಯಿತಲ್ಲಾ ಎನ್ನುವವ ಆಶಾವಾದಿ. ಹತ್ತು ಸಾವಿರ ರೂಪಾಯಿ ಖರ್ಚುಮಾಡಿದರೂ ಹತ್ತೇ ಚೀಲ ತೊಗರಿ ದೊರೆತವಲ್ಲಾ ಎಂದು ಅಳುವವ ನಿರಾಶವಾದಿ. ಪರೀಕ್ಷೆಯಲ್ಲಿ ಫೇಲಾದೆನಲ್ಲಾ ಎಂದು ಅಳುವವರು ನಿರಾಶಾವಾದಿಗಳು, ಫೇಲಾದರೇನಾಯಿತು ಒಂದೆರಡು ವಿಷಯಗಳಲ್ಲಿ ಉತ್ತೀರ್ಣನಾಗಿರುವೆವಲ್ಲಾ ಎಂದು ಖುಷಿ ಪಡುವವರು ಆಶಾವಾದಿಗಳು. ಈ ದೃಷ್ಟಿಯಿಂದ ಬಸವಣ್ಣನವರು ಸದಾ ಆಶಾವಾದಿಗಳು, ಅಲ್ಲಮಪ್ರಭುಗಳು ಸದಾ ನಿರಾಶಾವಾದಿಗಳು. ಅರಿವೆಂಬುದು ಇದೆಯಲ್ಲಾ ಎನ್ನುವವರು ಬಸವಣ್ಣನವರು, ಅರಿವಿಗೆ ತಕ್ಕಂತೆ ಆಚರಣೆ ಇಲ್ಲವಲ್ಲಾ ಎನ್ನುವವರು ಅಲ್ಲಮ ಪ್ರಭುಗಳು. ಕೊರಳಲ್ಲಿ ಲಿಂಗವಿದೆಯಲ್ಲಾ ಸಾಕು ಎಂದು ಬಸವಣ್ಣನವರು ಭಾವಿಸುತ್ತಿದ್ದರೆ ಲಿಂಗವಿದ್ದರೇನಾಯಿತು ಲಿಂಗಾಂಗ ಸಾಮರಸ್ಯ ಇಲ್ಲವಲ್ಲಾ ಎನ್ನುವವರು ಅಲ್ಲಮಪ್ರಭುಗಳು. ಖಂಡಜ್ಞಾನ ಬಸವಣ್ಣನವರಿಗೆ ಸಾಕು, ಅಖಂಡಜ್ಞಾನವೇ ಪ್ರಭುವಿಗೆ ಬೇಕು.

★

## ಶ್ರದ್ಧಾಂಜಲಿ

### ಆದರ್ಶ ಶಿಕ್ಷಕ, ಕ್ರಿಯಾಶೀಲ ಶ್ರೀ ಟಿ.ಬಿ. ವಿರೂಪಾಕ್ಷಯ್ಯನವರ ನಿಧನ



ಶ್ರೀ ಸಿದ್ಧಗಂಗಾ ಮಠದ ಪರಮ ಭಕ್ತರು, ಹಳೆಯ ವಿದ್ಯಾರ್ಥಿಗಳೂ ಆದ ಶ್ರೀ ಟಿ.ಬಿ. ವಿರೂಪಾಕ್ಷಯ್ಯನವರು ಆಗಸ್ಟ್ ೧೧ರ ಸೋಮವಾರ ರಾತ್ರಿ ನಿಧನರಾದರೆಂದು ತಿಳಿಸಲು ತುಂಬಾ ವಿಷಾದವಾಗುತ್ತದೆ.

ಎಪ್ಪತ್ನಾಲ್ಕು ವಸಂತಗಳನ್ನು ಕಂಡ ಶ್ರೀ ವಿರೂಪಾಕ್ಷಯ್ಯನವರು ವೃತ್ತಿಯಿಂದ ಶಿಕ್ಷಕರಾಗಿ ಉತ್ತಮ ಸೇವೆಸಲ್ಲಿಸಿದ್ದರು. ನಿವೃತ್ತಿಯಾದ ನಂತರ ತಮ್ಮ ಜೀವನವನ್ನು ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದರು. ಸರಳತೆ, ಸಜ್ಜನಿಕೆ ಹಾಗೂ ಸಹೃದಯತೆಗೆ ಹೆಸರಾಗಿದ್ದು ಎಲ್ಲರ ಪ್ರೀತಿ, ವಿಶ್ವಾಸ, ಗೌರವಗಳಿಗೆ ಪಾತ್ರರಾಗಿದ್ದರು. ಶ್ರೀ ವಿರೂಪಾಕ್ಷಯ್ಯನವರ ಹಠಾತ್ ನಿಧನ ಶ್ರೀಮಠಕ್ಕೆ ಹಾಗೂ ಸಮಾಜಕ್ಕೆ ಭರಿಸಲಾಗದ ನಷ್ಟ.

ಶಿಕ್ಷಕರಾಗಿ ಅಪಾರ ಗೌರವ, ಜನಪ್ರಿಯತೆಯನ್ನು ಗಳಿಸಿದ್ದ ಶ್ರೀ ವಿರೂಪಾಕ್ಷಯ್ಯನವರಿಗೆ ಹಲವಾರು ಪ್ರತಿಷ್ಠಿತ ಸಂಘ ಸಂಸ್ಥೆಗಳು 'ಆದರ್ಶ ಶಿಕ್ಷಕ' ಪ್ರಶಸ್ತಿಯನ್ನು ನೀಡಿ ಗೌರವಿಸಿವೆ. ಶಿಕ್ಷಕರ ಸಂಘ, ಬಸವ ಸಮಿತಿ, ಶ್ರೀ ಮಹದೇಶ್ವರಸ್ವಾಮಿ ದೇವಾಲಯ, ಶ್ರೀ ಸಿದ್ಧಗಂಗಾ ಕಲ್ಯಾಣ ಧಾಮ, ಶ್ರೀ ವೀರಭದ್ರಸ್ವಾಮಿ ಪ್ರಾಥಮಿಕ ಶಾಲೆ ಮೊದಲಾದ ಸಂಘ ಸಂಸ್ಥೆಗಳಲ್ಲಿ ಅವರು ಸಲ್ಲಿಸಿದ ಸೇವೆ ಸದಾ ಹಚ್ಚಹಸಿರು. ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅಪಾರಭಕ್ತಿ ಗೌರವಗಳನ್ನಿಟ್ಟುಕೊಂಡಿದ್ದ ಶ್ರೀ ವಿರೂಪಾಕ್ಷಯ್ಯನವರು ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಬೆಂಗಳೂರು ಶಾಖೆಯ ಪ್ರಾರಂಭಕ್ಕೆ ತುಂಬಾ ಶ್ರಮಿಸಿದ್ದರು. ಅದರ ಕಾರ್ಯದರ್ಶಿಯಾಗಿ ಹಲವಾರು ಪ್ರಗತಿಪರ ಕಾರ್ಯಕ್ರಮಗಳನ್ನು ರೂಪಿಸಲು ಪ್ರೇರಕ ಶಕ್ತಿಯಾಗಿದ್ದರು. ಚಂದ್ರಾಬಡಾವಣೆಯಲ್ಲಿರುವ ಶ್ರೀ ಶಿವಕುಮಾರಸ್ವಾಮಿ ವಿದ್ಯಾ ಸಂಸ್ಥೆ ಟ್ರಸ್ಟ್‌ನ ಖಜಾಂಚಿಗಳಾಗಿ ಅವರು ಸಲ್ಲಿಸಿದ ಸೇವೆ ಸ್ಮರಣೀಯ. ವಿದ್ಯಾಸಂಸ್ಥೆಯ ಸರ್ವತೋಮುಖ ಪ್ರಗತಿಯ ಬಗ್ಗೆ ಸದಾ ಚಿಂತನೆ ಮಾಡುತ್ತಿದ್ದರು.

'ಸಿದ್ಧಗಂಗಾ' ದಿವಂಗತರ ಆತ್ಮಕ್ಕೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತಾ, ಅವರ ಬಂಧು ಮಿತ್ರರಿಗೆ ಈ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಭಗವಂತನು ಕರುಣಿಸಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತದೆ.

## ಲೋಕೋಪಕಾರಿದೀಪ
## ಶ್ರೀ ಡಿ.ಕೆ. ಆದಿಕೇಶವುಲು

*ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ, ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮದಿನವನ್ನು ಗುರುವಂದನ ಸಮಾರಂಭವಾಗಿ ಸಡಗರ ಸಂಭ್ರಮ ಹಾಗೂ ಅರ್ಥಪೂರ್ಣವಾಗಿ ಆಚರಿಸುವ ದೃಷ್ಟಿಯಿಂದ ಪ್ರತಿವರ್ಷ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸುವ ಸಂಪ್ರದಾಯವನ್ನು ಹಮ್ಮಿಕೊಂಡು ನಡೆಸಿಕೊಂಡು ಬರಲಾಗುತ್ತಿದೆ. ಅದರಂತೆ ೯೬ನೇ ಗುರುವಂದನ ಸಮಾರಂಭದಲ್ಲಿ ಶ್ರೀ ಮತ್ತೂರು ಕೃಷ್ಣಮೂರ್ತಿ, ಶ್ರೀ ವಿಜಯ ಸಂಕೇಶ್ವರ, ಡಾ. ಕೆ.ಟಿ. ಸುರೇಂದ್ರ, ಶ್ರೀ ಡಿ.ಕೆ. ಆದಿಕೇಶವುಲು ಹಾಗೂ ಶ್ರೀ ಕಸ್ತೂರಿ ರಮೇಶ್ ಪೈ ಅವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ ಫಲತಾಂಬೂಲ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಲೋಕೋಪಕಾರಿಯಾಗಿ ಸೇವೆ ಸಲ್ಲಿಸಿದ ಶ್ರೀ ಡಿ.ಕೆ. ಆದಿಕೇಶವುಲು ಅವರ ಪರಿಚಯವನ್ನು ಪ್ರಸ್ತುತ ಸಂಚಿಕೆಯಲ್ಲಿ ಪರಿಚಯ ಮಾಡಿಕೊಡಲಾಗಿದೆ.*

ತಾನುಂಟೋ ಮೂರು ಲೋಕವುಂಟೋ ಎಂಬುವವರೇ ಎಲ್ಲೆಲ್ಲಿ ನೋಡಿದರೂ ಎತ್ತೆತ್ತ ನೋಡಿದರೂ ಕಾಣುತ್ತಿರುವಾಗ ಸಮಾಜದ ಅಭಿವೃದ್ಧಿಗಾಗಿ, ಲೋಕೋಪಕಾರಿಯಾದ ಕೈಂಕರ್ಯದಲ್ಲಿ ಶ್ರಮಿಸುತ್ತ ಜೀವನದ ಸಾರ್ಥಕತೆಯನ್ನು ಕಾಣುವವರು ಅತಿವಿರಳ. ತಾನು, ತನ್ನದು ಎಂಬುದನ್ನೆಲ್ಲಾ ಜನಕಲ್ಯಾಣಕ್ಕೆ ವಿನಿಯೋಗಿಸುವ ಎತ್ತರದ ಮನಸ್ಸುಗಳಿಂದಲೇ ಬಾಳಿಗೊಂದು ಅರ್ಥ ಮತ್ತು ಬೆಲೆ ಎಂಬುದನ್ನು ತಿಳಿದವರು ಶ್ರೀ ದಳವಾಯಿ ಕೃಷ್ಣಸ್ವಾಮಿ ಆದಿಕೇಶವುಲು.

ಶ್ರೀ ಆದಿಕೇಶವುಲು ದಿನಾಂಕ ೨೨.೯.೧೯೪೧ರಲ್ಲಿ ಆಂಧ್ರಪ್ರದೇಶದ ಚಿತ್ತೂರಿನಲ್ಲಿ ಶ್ರೀ ಕೃಷ್ಣಸ್ವಾಮಿನಾಯ್ಡು ಮತ್ತು ಶ್ರೀಮತಿ ರುಕ್ಮಿಣಿ ಅವರ ಪುತ್ರರತ್ನರಾಗಿ ಜನಿಸಿದರು. ಬಲಿಜ ಸಮಾಜದ ಭಾಗ್ಯದ ಭಾಸ್ಕರನಾಗಿ ಉದಯಿಸಿದರು. ಮೆಕಾನಿಕಲ್ ಇಂಜಿನಿಯರಿಂಗ್ ಪದವೀಧರರಾಗಿ ವೃತ್ತಿ ಜೀವನವನ್ನು ಚಿತ್ತೂರಿನ ಸಕ್ಕರೆ ಕಾರ್ಖಾನೆಯಲ್ಲಿ ಆರಂಭಿಸಿದರು. ೬.೭.೧೯೬೮ರಲ್ಲಿ ವೈವಾಹಿಕ ಬಾಳಿಗೆ ದೀಪಬೆಳಗಿಸಿದರು. ಧರ್ಮಪತ್ನಿಯಾಗಿ ಶ್ರೀ ಮುನಿವೆಂಕಟಸ್ವಾಮಪ್ಪ ಮತ್ತು ಶ್ರೀಮತಿ ಚೆಂಗಮ್ಮನವರ ಸುಪುತ್ರಿಯಾದ ಶ್ರೀಮತಿ ಡಿ.ಎ. ಸತ್ಯಪ್ರಭ ಅವರನ್ನು ಜೀವನ ಸಂಗಾತಿಯನ್ನಾಗಿ ಸ್ವೀಕರಿಸಿದರು. ದಾಂಪತ್ಯ ಅನೋನ್ಯತೆಯ ಮಧುರ ಬಳ್ಳಿಯಾಗಿ ಬೆಳೆಯಿತು. ಮೂವರು ಮಕ್ಕಳು ಶ್ರೀಯುತರ ಕುಟುಂಬದ ಸಂತೋಷವನ್ನು ಹೆಚ್ಚಿಸಿದರು. ಶ್ರೀಮತಿ ಡಿ.ಎ. ತೇಜಸ್ವಿನಿ, ಶ್ರೀಮತಿ ಡಿ.ಎ. ಕಲ್ಪಜ ಮತ್ತು ಶ್ರೀ ಡಿ.ಎ. ಶ್ರೀನಿವಾಸರವರು. ಹಿತವಾದ ಮಿತವಾದ ಸಂಸಾರ ಸುಸಂಸ್ಕೃತಿಯ ದಿಗಂತದೆಡೆಗೆ ನಡೆಯಿತು.

ಶ್ರೀ ಆದಿಕೇಶವುಲು ದಕ್ಷಿಣ ಭಾರತದಲ್ಲಿಯೇ ಪ್ರಮುಖ ಕೈಗಾರಿಕೋದ್ಯಮಿಗಳು, ಲೋಕಕಲ್ಯಾಣಾಕಾಂಕ್ಷಿಗಳು. ಪರಹಿತ ದೃಷ್ಟಿಯಿಂದ ೧೫ ವರುಷಗಳ ಹಿಂದೆಯೇ ಶ್ರೀನಿವಾಸ ಟ್ರಸ್ಟ್‌ನ್ನು ಪ್ರಾರಂಭಿಸಿದರು. ಟ್ರಸ್ಟ್‌ನ ಮುಖ್ಯೋದ್ದೇಯ ಶಿಕ್ಷಣ ಪ್ರಸಾರ ಮತ್ತು ಅಗತ್ಯವಿರುವವರಿಗೆ ಉದಾರಸಹಾಯ ನೀಡುವುದು. ಟ್ರಸ್ಟಿನ ವ್ಯವಸ್ಥಾಪಕ ವಿಶ್ವಸ್ಥರಾಗಿ ಶ್ರೀಯುತರು ಸಮಾಜೋ-ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ಸಾರ್ವಜನಿಕ ಕಲ್ಯಾಣಕ್ಕಾಗಿ ಹಮ್ಮಿಕೊಳ್ಳುತ್ತ ಬಂದರು. ಆ ದಿಶೆಯಲ್ಲಿ ಶ್ರೀನಿವಾಸ ಟ್ರಸ್ಟ್ ಸಾಧಿಸಿದ ಕೆಲವು ಸಾಧನೆಗಳು ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ಪ್ರಗತಿಗೆ ಶ್ರಮಿಸಿದವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ನಮೂದಿಸಲು ಸಂತೋಷವಾಗುತ್ತದೆ.

೧. ಬೆಂಗಳೂರಿನ ರಾಜರಾಜೇಶ್ವರಿನಗರದಲ್ಲಿ ಶ್ರೀ ತಿರುಚ್ಚಿಸ್ವಾಮಿಗಳಿಗೆ ಅರ್ಪಿಸಿದ ಜ್ಞಾನಾಕ್ಷಿ ರಾಜರಾಜೇಶ್ವರಿ ಕಲ್ಯಾಣ ಸಂಕೀರ್ಣ, ೨. ಶೃಂಗೇರಿಯಲ್ಲಿ ನಿರ್ಮಿಸಿದ ಭಾರತೀತೀರ್ಥ ಆನಂದ ಸಭಾಂಗಣ, ೩. ಉಡುಪಿ ಜಿಲ್ಲೆಯ ಕೊಲ್ಲೂರಿನಲ್ಲಿ ನಿರ್ಮಿಸಿದ ವೇದಪಾಠ ಶಾಲೆ ಮತ್ತು ಸಮುದಾಯಭವನ, ೪. ಶೃಂಗೇರಿಯಲ್ಲಿ ನಿರ್ಮಾಣ ಮಾಡಿದ ಹೊರರೋಗಿಗಳ ಬ್ಲಾಕ್, ೫. ತಿರುತಣಿಯಲ್ಲಿ ನಿರ್ಮಿಸಿದ ಕಾವಡಿಮಂಟಪ, ೬. ಪುಟ್ಟಪರ್ತಿ ಶ್ರೀ ಸತ್ಯಸಾಯಿ ಕೇಂದ್ರ ಟ್ರಸ್ಟ್‌ಗಾಗಿ ಕಟ್ಟಿಸಿದ ಸಾಯಿ ಶ್ರೀನಿವಾಸ ವಿ.ವಿ.ಐ.ಪಿ. ಅತಿಥಿಗೃಹ, ತಿರುಪತಿಯಲ್ಲಿ ಶ್ರೀನಿವಾಸನಿಲಯ ಅತಿಥಿ ಮಂದಿರ, ಶಬರಿಮಲೆಯಲ್ಲಿ ಅಯ್ಯಪ್ಪಸ್ವಾಮಿ ಯಾತ್ರಾರ್ಥಿಗಳಿಗಾಗಿ ನಿರ್ಮಾಣ ಮಾಡಿದ ವಿಶ್ರಾಂತಿ ಗೃಹ, ೭. ತೆಲುಗಿನಲ್ಲಿ ''ಪುಣ್ಯ ಕ್ಷೇತ್ರಾಲು'' ಗ್ರಂಥ ಪ್ರಕಟಣೆ, ''ಕನ್ನಡದಲ್ಲಿ ಪುಣ್ಯ ಕ್ಷೇತ್ರಗಳು'' ಗ್ರಂಥ ಪ್ರಕಟಣೆ, ತೆಲುಗಿನಲ್ಲಿ ಪತ್ರಿಕೋದ್ಯಮದ ಪ್ರಗತಿಗಾಗಿ ಜರ್ನಲ್ ಇನ್ ತೆಲುಗು ಬಿಡುಗಡೆ, ೮. ಗುಂಡ್ಲುಪೇಟೆ ತಾಲ್ಲೂಕಿನ ಹಿಮವದ್ ಗೋಪಾಲಸ್ವಾಮಿ ದೇವಾಲಯದ ಜೀರ್ಣೋದ್ಧಾರ, ೯. ಕರ್ನಾಟಕ, ಆಂಧ್ರಪ್ರದೇಶ ರಾಜ್ಯಗಳಲ್ಲಿ ಲೆಕ್ಕವಿಲ್ಲದಷ್ಟು ದೇವಾಲಯಗಳ ಅಭಿವೃದ್ಧಿಗೆ ಉದಾರವಾದ ಕೊಡುಗೆ, ೧೦. ಬೆಂಗಳೂರು ಮತ್ತು ಹೈದ್ರಾಬಾದ್‌ಗಳಲ್ಲಿ ಸಾಂಸ್ಕೃತಿಕ ಮತ್ತು ಸಾಮಾಜಿಕ ಸೇವಾ ಚಟುವಟಿಕೆಗಳಿಗೆ ಮುಕ್ತ ಹಸ್ತದ ಕೊಡುಗೆ, ೧೧. ಬೆಂಗಳೂರು ·ಹೈದ್ರಾಬಾದ್‌ಗಳಲ್ಲಿ ''ಬರಪರಿಹಾರ ನಿಧಿ ಸಂವೃದ್ಧಿ'' ಸೇವೆ, ೧೨. ಲೋಕ ಕಲ್ಯಾಣಾರ್ಥವಾಗಿ ಬೆಂಗಳೂರಿನಲ್ಲಿ ಇಸ್ಕಾನ್ ಮತ್ತು ಟಿಟಿಡಿ ಧರ್ಮಸಂಸ್ಥೆಗಳ ಸಹಯೋಗದಲ್ಲಿ ''ಶ್ರೀಮನ್ನಾರಾಯಣ ಅಷ್ಟಾಕ್ಷರಿ ಸುದರ್ಶನ ಅದ್ಭುತ ಶಾಂತಿ ಯಜ್ಞ ಮತ್ತು ಶ್ರೀನಿವಾಸ ಕಲ್ಯಾಣ'' ಮಂಗಳಕಾರ್ಯ, ೧೩. ಗ್ರಾಮಾಂತರ ಪ್ರದೇಶದ ಆರೋಗ್ಯ ಸೇವೆಗಾಗಿ ಪ್ರಾರಂಭಿಸಿದ ಸಂಚಾರಿ ''ಶಾರದ ರೂರಲ್ ಕಮ್ಯುನಿಟಿ ಕ್ಲಿನಿಕ್'', ೧೪. ಕರ್ನಾಟಕದಲ್ಲಿ ಗ್ರಾಮ ಪುನರುಜ್ಜೀವನಕ್ಕಾಗಿ ಪ್ರಾರಂಭಿಸಿದ ''ಸ್ವಸ್ತಿ ಗ್ರಾಮ ಯೋಜನೆಯಡಿಯಲ್ಲಿ ಕುಡಿಯುವ ನೀರಿನ ಸೌಲಭ್ಯ ಪ್ರಮುಖವಾದುದು. ಒಂದು ಸಾವಿರ ಗ್ರಾಮಗಳು ಆಂಧ್ರಪ್ರದೇಶದಲ್ಲಿ ಸರ್ಕಾರದ ಸಹಯೋಗದಲ್ಲಿ ಈ ಯೋಜನೆಯ ಫಲಾನುಭವಿಗಳಾಗಿವೆ. ಶ್ರೀ ಆದಿಕೇಶವುಲು ಅವರು ಈ ಯೋಜನೆಗೆ ತಮ್ಮನ್ನು ಅರ್ಪಿಸಿಕೊಂಡ ಉದಾರ ಚೇತನವಾಗಿದ್ದಾರೆ. ಇತ್ತೀಚೆಗೆ ತಿರುಪತಿಯಲ್ಲಿ ''ಜಲನಿಧಿ ಕಾರ್ಯಕ್ರಮ''ದಡಿಯಲ್ಲಿ ಶ್ರೀಯುತರು ತಿರುಪತಿ ಬೆಟ್ಟದ ಮೇಲಕ್ಕೆ ನೀರು ಸರಬರಾಜು ಮಾಡುವ ವ್ಯವಸ್ಥೆ ಮಾಡಿದ್ದಾರೆ. ಅಂತೆಯೇ ಕರ್ನಾಟಕದಲ್ಲಿ ಕೋಲಾರ ಜಿಲ್ಲೆಯಲ್ಲಿ ಶ್ರೀನಿವಾಸಪುರ ಮತ್ತು ೧೮೦ ಗ್ರಾಮಗಳಿಗೆ ಸರ್ಕಾರದ ಸಹಯೋಗದಲ್ಲಿ ಕುಡಿಯುವ ನೀರಿನ ಸೌಲಭ್ಯವನ್ನು ಒದಗಿಸುವ ವ್ಯವಸ್ಥೆಯಲ್ಲಿ ಶ್ರಮಿಸಿದ್ದಾರೆ. ೧೫. ಚಿತ್ತೂರಿನಲ್ಲಿ ಆರ್.ಕೆ. ವಿದ್ಯಾಲಯ ನಾಮಾಂಕಿತದಲ್ಲಿ ಪ್ರಾಥಮಿಕ ಹಾಗೂ ಸೆಕೆಂಡರಿ ಶಾಲೆಗಳನ್ನು ಸ್ಥಾಪಿಸಿದ್ದು, ೧೬. ೧೯೯೮-೯೯ರಲ್ಲಿ ಶ್ರೀನಿವಾಸ ಟ್ರಸ್ಟ್ ವತಿಯಿಂದ ಚಿತ್ತೂರಿನಲ್ಲಿ ''ಶ್ರೀನಿವಾಸ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಅಂಡ್ ಮ್ಯಾನೇಜ್‌ಮೆಂಟ್ ಇಂಜನಿಯರಿಂಗ್ ಕಾಲೇಜು ಸ್ಥಾಪನೆ, ೧೭. ಬೆಂಗಳೂರಿನ ವೈಟ್‌ಫೀಲ್ಡ್‌ನಲ್ಲಿ ೨೦೦೨-೦೩ರಲ್ಲಿ ''ವೈದೇಹಿ ಇನ್ಸ್‌ಟ್ಯೂಟ್ ಆಫ್ ಹೆಲ್ತ್ ಮೆಡಿಕಲ್ ಸೈನ್ಸ್ ಅಂಡ್ ರಿಸರ್ಚ್ ಸೆಂಟರ್ ಸ್ಥಾಪನೆ, ಈ ಸಂಸ್ಥೆ ೧೦೦ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಮತ್ತು ೧೦೦೦ ಹಾಸಿಗೆಗಳ ಸೌಲಭ್ಯವನ್ನು ನೀಡುತ್ತಿದೆ. ಶ್ರೀನಿವಾಸ ಟ್ರಸ್ಟ್ ಮೆಡಿಕಲ್ ಕಾಲೇಜ್ ಆಸ್ಪತ್ರೆಯಲ್ಲಿ ೫೦೦ ರೋಗಿಗಳಿಗೆ ಉಚಿತ ವೈದ್ಯೋಪಚಾರ ಮತ್ತು ಆಹಾರವನ್ನು ನೀಡುತ್ತಿದೆ. ಇಷ್ಟೆಲ್ಲಾ ಜನಕಲ್ಯಾಣಪರ ಸೇವೆಯನ್ನು ಮಾಡುತ್ತ ಬಂದಿರುವ ಶ್ರೀ ಆದಿಕೇಶವುಲು ಅವರು ದೂರದೃಷ್ಟಿಯುಳ್ಳ ಜೀವನನೇತಾರರು.

ಶ್ರೀಯುತರು ಡಿ.ಕೆ. ಆದಿಕೇಶವುಲು ಗ್ರೂಪ್ ಆಫ್ ಕಂಪನೀಸ್ ಕೌಟುಂಬಿಕ ಸಂಸ್ಥೆಯನ್ನು ಪ್ರಾರಂಭಿಸಿ ೩೫೦ ಕೋಟಿ ರೂ.ಗಳ ವಹಿವಾಟಿನ ಜವಾಬ್ದಾರರಾಗಿದ್ದಾರೆ. ಕರ್ನಾಟಕ ಬ್ರಿವರೀಸ್ ಅಂಡ್ ಡಿಸ್ಟರಿಲೀಸ್ ಲಿ., ಮೈಸೂರು ಫ್ರೂಟ್ ಪ್ರಾಡಕ್ಟ್ಸ್, ಹಾಸನ್ ಪವರ್‌ಸಪ್ಲೈ, ಬಾಲಾಜಿ ಪ್ಲಾಂಟೇಷನ್, ಶ್ರೀನಿವಾಸ ಡಿಸ್ಟಲರೀಸ್ ಲಿ., ಚಿತ್ತೂರು, ಶ್ರೀವಾಣಿ ಷುಗರ್ ಲಿ., ಪುಂಗನೂರು, ಆಂಧ್ರಪ್ರದೇಶ, ತಿರುಚಿ ಸ್ಟೀಲ್ ರೋಲಿಂಗ್‌ಮಿಲ್ಸ್ ಲಿ., ತಿರುಚಿ, ಶ್ರೀನಿವಾಸ ಬಿಲ್ಡರ್ಸ್, ಬೆಂಗಳೂರು, ಚೈತನ್ಯ ಪ್ರಾಪರ್ಟೀಸ್ ಪ್ರೈವೇಟ್ ಲಿ., ವೈಟ್‌ಫೀಲ್ಡ್, ಮಲ್ಯ ಆಸ್ಪತ್ರೆ, ಬೆಂಗಳೂರು, ಮೆಡಿನೋವ ಡೈಯಾಗ್ನಿಟಿಕ್ ಸೆಂಟರ್, ಬೆಂಗಳೂರು, ವೈದೇಹಿ ಇನ್‌ಸ್ಟಿಟ್ಯೂಟ್ ಆಫ್ ಹೆಲ್ತ್, ಬೆಂಗಳೂರು – ಈ ಎಲ್ಲ ಸಂಸ್ಥೆಗಳ ರೂವಾರಿಗಳಾಗಿರುವ ಶ್ರೀ ಆದಿಕೇಶವುಲು ಸ್ಫೂರ್ತಿಯ ಚಿಲುಮೆ, ಸಾಹಸದ ಭಗೀರಥ, ಸೇವಾ ಶ್ರೀ ಶಿಲ್ಪಿಯೆನಿಸಿರುವುದು ಕರ್ನಾಟಕಾಂಧ್ರಗಳ ಹೆಮ್ಮೆಯೆನಿಸಿದೆ. ಇಂಥವರಿಂದಲೇ ಬದುಕಿಗೊಂದು ಅರ್ಥ. ಪರೋಪಕಾರದಲ್ಲಿ ಆತ್ಮಕಲ್ಯಾಣವನ್ನು ಕಾಣುತ್ತಿರುವ ಶ್ರೀಯುತರು ನಿಜಕ್ಕೂ ಯಾವುದೇ ಸಮಾಜಕ್ಕೆ, ನಾಡಿಗೆ ಭೂಷಣ.

ಶ್ರೀ ಆದಿಕೇಶವುಲು ಸಂಭಾವಿತರು, ಶ್ರೀಮಂತಿಕೆ ಯನ್ನು ಲೋಕಕಲ್ಯಾಣದಲ್ಲಿ ವಿನಿಯೋಗಿಸಿದ ಉದಾರಿಗಳು. ವಿನಯ ಸೌಜನ್ಯಗಳಿಗೆ ಹೆಸರಾದವರು. ಗುರುಜನರಲ್ಲಿ ಭಕ್ತಿ ಶ್ರದ್ಧೆಗಳನ್ನುಳ್ಳವರು. ದಾನಿಗಳು, ಧರ್ಮಾಭಿಮಾನಿಗಳು, ಕ್ರಿಯಾಶೀಲರು, ಸಂಘಟನಾ ಸಾಮರ್ಥ್ಯಶೀಲರು, ಹೆತ್ತನಾಡಿಗೆ, ಹೊತ್ತರಾಜ್ಯಕ್ಕೆ ಸೇವೆ ಸಲ್ಲಿಸುತ್ತಿರುವ ಸುಮನಸ್ಕರು.

ಶ್ರೀಯುತರ ಲೋಕೋಪಕಾರಿ ನಿಸ್ವಾರ್ಥ ಸೇವೆಯನ್ನು ಗಮನಿಸಿದ ಶ್ರೀ ಸಿದ್ಧಗಂಗಾ ಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ವಿವಿಧ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಬಂಧು-ಭಗಿನಿಯರು, ಶ್ರೀಮಠದ ಇತಿಹಾಸದಲ್ಲಿ ಬೆಳಕಿನ ಯುಗವನ್ನೇ ನಿರ್ಮಾಣ ಮಾಡಿದ **ಉಪನಿಷತ್ತಿನ ಜೀವಂತ ಭಾಷ್ಯರೂಪಿಗಳಾದ, ಶರಣ ಸಂಸ್ಕೃತಿಯ ಶಾಂತಸೂರ್ಯರೆನಿಸಿದ ತ್ರಿವಿಧ ದಾಸೋಹಿ ಬಸವತತ್ತ್ವಪ್ರೇಮಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ಗಳವರ ೯೬ನೆಯ ಜನ್ಮದಿನೋತ್ಸವ – ಗುರುವಂದನ ಪವಿತ್ರ ಸಮಾರಂಭದಲ್ಲಿ ಶ್ರೀ ಆದಿಕೇಶವುಲು ಅವರನ್ನು ''ಲೋಕೋಪಕಾರಿದೀಪ''**ವೆಂದು ಗೌರವಿಸಿ ಸನ್ಮಾನಿಸಲಾಯಿತು.

❀

# ತೆಂಗಿಗೆ ಸಂಬಂಧಿಸಿದ ಕೆಲವು ಜನಪದ ನಂಬಿಕೆಗಳು

– ಡಾ. ಚಿಕ್ಕಣ್ಣ ಯಣ್ಣೆಕಟ್ಟೆ
ಕನ್ನಡ ವಿಭಾಗ
ಸರ್ಕಾರಿ ಪ್ರಥಮದರ್ಜೆ ಕಾಲೇಜು,
ಶಿರಾ, ತುಮಕೂರು ಜಿಲ್ಲೆ.

**ಪ್ರ**ಕೃತಿಯಲ್ಲಿ ಮಾನವ ಅಗೋಚರ ಶಕ್ತಿಯಲ್ಲಿ ನಂಬಿಕೆ ತಕ್ಕ ಆಚರಣೆಯ ಹಿನ್ನೆಲೆಯಲ್ಲಿ ದೈವವನ್ನು ಕಂಡುಕೊಂಡಿದ್ದಾನೆ. ಆ ದೈವದ ಮುಂದೆ ತನ್ನ ಒಳಿತು, ಕೆಡಕಿಗೆ ತನ್ನದೇ ಆದ ಸಂಸ್ಕೃತಿಯನ್ನು ರೂಢಿಸಿಕೊಂಡಿದ್ದಾನೆ. ಹಾಗೆ ರೂಢಿಸಿಕೊಂಡ ಸಂಸ್ಕೃತಿಯೊಂದರ ಸಾಮೂಹಿಕ ರೂಪದಲ್ಲಿ ಹಲವು ಬಗೆಯ ಆಚರಣೆಗಳು ರೂಪುಗೊಂಡಿವೆ. ಈ ಬಗೆಯ ಆಚರಣೆಗಳು ಬದುಕಿನ ಪ್ರಧಾನ ನಡಾವಳಿಗಳಾದ ಧರ್ಮ, ಕರ್ಮ, ನ್ಯಾಯ ನಿಷ್ಠೆ, ನಂಬಿಕೆ, ಸಂಪ್ರದಾಯ ಈ ಮೊದಲಾದ ಜನಪದ ರೂಢಿಗಳ ಮೇಲೆ ನಿಚ್ಚಳ ಪ್ರಭಾವ ಬೀರಿವೆ. ಅಂತಹ ಪ್ರಭಾವ ಗಳನ್ನು ಸದಾ ಜಾಗ್ರತಗೊಳಿಸುತ್ತ, ಜೀವಂತಗೊಳಿಸುತ್ತ, ಜೀವಂತಸಾಕ್ಷಿಗಳಾಗಿ ಜನಪದ ನಂಬಿಕೆ ಗಳು ಕೆಲಸ ಮಾಡುತ್ತಿವೆ.



ಮಾನವನ ಸೂಕ್ತ ಭಾವನೆಗಳ ಭಯ ಮತ್ತು ಮಾನಸಿಕ ಅಸ್ಥಿರತೆಯ ಪರಿಹಾರೋಪಾಯವಾಗಿ ರೂಪಗೊಂಡ ನಂಬಿಕೆ ಗಳು; ಸಮುದಾಯ ಒಪ್ಪಿಗೆಯ ಫಲವಾಗಿ ಸಾರ್ವತ್ರೀಕರಣ ವಾಗಿ ರೂಢಿಯಲ್ಲಿರುವ ಈ ನಂಬಿಕೆಗಳು; ಸಮುದಾಯ ಒಪ್ಪಿಗೆಯ ಫಲವಾಗಿ ಜನತೆಯ ದೈನಂದಿನ ಬದುಕನ್ನು ಗ್ರಹಿಸುತ್ತ ನಡಾವಳಿಯ ಮಾದರಿಯನ್ನು ರೂಪಿಸುತ್ತ ಬದುಕಿಗೆ ನಿಯಂತ್ರಣ ಗಳಾಗಿಯೂ ಬೆಳೆದುಬಂದಿವೆ. ಜೊತೆಗೆ ಸಂಪ್ರದಾಯಕ್ಕೆ ಚಾಲನೆ ನೀಡಿ ಜನಪದರ ಮಾನಸಿಕ ಸ್ತರದಲ್ಲಿ ಗಾಢವಾಗಿ ನೆಲೆನಿಂತು ಅದಕ್ಕೊಂದು ಸಾಮಾಜಿಕ ಚೌಕಟ್ಟನ್ನು ಹಾಕಿ ಕ್ರಿಯಾಶೀಲ ಆಚರಣೆಗಳಾಗಿವೆ. ಈ ಬಗೆಯ ಮನುಷ್ಯ ಸಂಬಂಧಿ ಭಾವನೆ ಗಳು ಒಂದು ವಿಷಯಕ್ಕೆ ಗಾಢವಾಗಿ ಒಪ್ಪಿಸಿಕೊಂಡಾಗ ಅದು ನಂಬಿಕೆಯಾಗುತ್ತದೆ.

**ಕ**ರ್ನಾಟಕ ಬಹುವೃಕ್ಷ ಸಂತತಿಯ ಶ್ರೀಮಂತ ನಾಡು, ಶ್ರೀಗಂಧ, ತೇಗ, ಹೊನ್ನೆ, ಬೀಟೆ, ಹಲಸು, ಮಾವು, ಬೇವು, ಹುಣಸೆ, ಆಲ ಇತ್ಯಾದಿ ಮರಗಳಂತೆ ತೆಂಗು ಕೂಡ ಪ್ರಸಿದ್ಧವಾದ ಸಸ್ಯ ವೃಕ್ಷ. ತೆಂಗು ಎಲ್ಲಾ ವರ್ಗದ, ಎಲ್ಲಾ ಕಾಲದ, ಪ್ರದೇಶದ ಜನಪದರ ಬದುಕಿನ ಆಸರೆಯ ಆಕರವೂ ಹೌದು. ಜನಪದರ ಪರಮ ಪೂಜ್ಯತೆಯ ವೃಕ್ಷವೂ ಕೂಡ.

ಎಳನೀರು, ಕಾಯಿ, ಕೊಬ್ಬರಿ, ಚಿಪ್ಪು, ಎಣ್ಣೆ, ಹಿಂಡಿ, ಗುಂಡಿ, ಪಶು ಆಹಾರ, ಗೊಬ್ಬರ, ಹಲ್ಲುಪುಡಿ, ಔಷಧಿ, ಇದ್ದಿಲು, ಗರಿ, ಸೋಗೆ, ಕುರಂಬಾಳೆ, ಕಡ್ಡಿ, ಮಟ್ಟೆ, ನಾರು, ಹಗ್ಗ, ಹಾಸಿಗೆ, ರಟ್ಟು, ಚಿತ್ರ ಕೌಶಲ್ಯ, ಮರಮುಟ್ಟು, ಬೆಲ್ಲ, ಕೆಂಪು ಕಲ್ಲುಸಕ್ಕರೆ, ನೀರಾ, ಸಾರಾಯಿ, ತಟ್ಟೆ, ಸೌಟು, ಎಲೆ, ಚಾಪೆ, ಚಪ್ಪರ, ಪೊರಕೆ ಹೀಗೆ ಬಹುಪಯೋಗಿ ತೆಂಗು ಕರ್ನಾಟಕದ ಪ್ರಮುಖ ವಾಣಿಜ್ಯ – ಆಹಾರ ಬೆಳೆ. ತೆಂಗು ಕರ್ನಾಟಕದ ಜೀವನಾಡಿಯೂ ಹೌದು. ಸಸ್ಯ ಸಂಬಂಧಿ ವೃಕ್ಷಗಳಲದಲ್ಲೆಲ್ಲಾ ಅತ್ಯಂತ ಬಹುವಾರ್ಷಿಕ ಬೆಳೆಯಾದ ತೆಂಗು ಬಹುಪಯೋಗಿ ಬೆಳೆಯಾಗಿ ರೈತಾಪಿ ಸಮುದಾಯಕ್ಕೆ ಆಸರೆಯೂ ಹೌದು. ಹೀಗೆ ಬಹುಪಯೋಗದ ಫಲದಿಂದಾಗಿಯೇ ಇಂದು ತೆಂಗು ಹಲವು ಬಗೆಯ ಅಧ್ಯಯನಕ್ಕೆ, ಸಂಶೋಧನೆಗೆ ಒಳಗಾಗುತ್ತಿದೆ.





**ಜ**ಗತ್ತಿನಾದ್ಯಂತ ಬಳಕೆಯಲ್ಲಿರುವ ತೆಂಗು ಸಿಂಹಳ ಮೂಲದ್ದು ಎಂದು ಒಂದು ಅಭಿಪ್ರಾಯವಿದೆ. ಆಗ್ನೇಯ ಏಷ್ಯಾದಿಂದ ಬಂದಿದೆಯೆಂದು ಇನ್ನೊಂದು ವಾದವೂ ಇದೆ. ಪಾಲಿನೇಷ್ಯಾ – ಆಗ್ನೇಯಾ ಏಷ್ಯಾದ ಆಸ್ಟ್ರೋ ಏಷ್ಯಾಟಿಕ್ ಭಾಷೆ ಗಳನ್ನು ಆಡುತ್ತಿದ್ದ ಆಸ್ಟ್ರೀಯಾ ಲಾಯಿಡ್ ಜನ ಪ್ರಾಗೈತಿಹಾಸಿಕ ಕಾಲದಲ್ಲಿ ಭಾರತಕ್ಕೆ ವಲಸೆ ಬಂದರೆಂದು, ಆ ಜನರೇ ತೆಂಗಿನ ಕೃಷಿಯನ್ನು ರೂಢಿಗೆ ತಂದರೆಂದು ವಿದ್ವಾಂಸರ ಅಭಿಪ್ರಾಯವೂ ಇದೆ. ಆಸ್ಟ್ರಾ ಲಾಯಿಡ್ ಜನರ ಅವಶೇಷಗಳು ಕರ್ನಾಟಕದಲ್ಲಿ ನವ ಶಿಲಾಯುಗದಿಂದ ಕಂಡುಬಂದರೂ ಆ ಕಾಲದಲ್ಲಿ ಇಲ್ಲಿ ತೆಂಗಿನ ಕೃಷಿ ಬಗ್ಗೆ ಸ್ಪಷ್ಟ ಮಾಹಿತಿಗಳಿಲ್ಲ. ಕರ್ನಾಟಕದಲ್ಲಿ ಕ್ರಿ.ಶ. ೫-೬ನೇ ಶತಮಾನದಲ್ಲಿ ತೆಂಗಿನ ತೋಟ, ಕಾಯಿಗಳ ಬಗ್ಗೆ ಉಲ್ಲೇಖ ದೊರೆಯುತ್ತದೆ.

**ಚೀ**ನಿ ಮೂಲದ ಜನಪದ ಕಥೆಯೊಂದು ತೆಂಗಿನ ಉಗಮದ ಬಗೆಗೆ ರೂಪುಗೊಂಡಿದೆ. ಜ್ಯೋತಿಷ್ಯ ಶಾಸ್ತ್ರಜ್ಞನೊಬ್ಬನು ಈ ದಿನ ಬಹಳ ಪ್ರಶಸ್ತ ಎಂದು, ಇಂದು ಭೂಮಿಗೆ ಏನನ್ನು ಬಿತ್ತಿದರೂ ಅದು ಮಾನವಕೋಟಿಗೆ ಪರಮ ಪ್ರಯೋಜನವಾಗುತ್ತದೆ ಎಂದು ರಾಜನಿಗೆ ಹೇಳುತ್ತಾನೆ. ಆಗ ರಾಜ ಅದೇ ಶಾಸ್ತ್ರಜ್ಞನ ತಲೆಯನ್ನು ಭೂಮಿಗೆ ನೆಡುತ್ತಾನೆ. ಮುಂದೆ'ಯು ಎಂಬ ರಾಜಕುಮಾರನೊಬ್ಬ ಆ ವ್ಯಕ್ತಿಯ ತಲೆಯನ್ನೇ ಕತ್ತರಿಸಿದಾಗ ಆತನ ತಲೆ ತಾಳೆಯಮರದ ಕೊಂಬೆಯಲ್ಲಿ ಸಿಕ್ಕಿಕೊಂಡಿತು. ಅದು ತಲೆಯ ರೂಪವಾಗಿ ತೆಂಗಿನಕಾಯಿ ಆಯಿತು ಎಂದು ಆ ಕಥೆ ಹೇಳುತ್ತದೆ. ಹೀಗೆ ಬಹು ಉಪಕಾರಿಯಾದ ತೆಂಗು ಜನಪದರ ನಂಬಿಕೆಯಾಗಿ ನೆಲೆನಿಂತ ಬಗೆಯನ್ನು, ಅದು ಜನಪದರ ವಿವಿಧ ಪ್ರಾಕಾರಗಳಲ್ಲಿ ಬದುಕಿ ನೊಂದಿಗೆ ವ್ಯಾಪಕವಾಗಿ ಬೆಳೆದುಬಂದ ಬಗೆಯನ್ನು ಕಾಣ ಬಹುದು.

**ಪಾ**ರ್ಸಿಗಳು ಹೊಸದಾಗಿ ಮದುವೆಯಾದ ಜೋಡಿಗಳನ್ನು ಮನೆ ತುಂಬಿಸಿಕೊಳ್ಳುವಾಗ ಹೊಸ್ತಿಲ ಮೇಲೆ ತೆಂಗಿನಕಾಯಿ ಯನ್ನು ಇಟ್ಟು ಒಡೆಯುವ ಮೂಲಕ ಹೊಸ ದಂಪತಿಗಳನ್ನು ಸ್ವಾಗತಿಸುತ್ತಾರೆ. ಹೀಗೆ ಸ್ವಾಗತಿಸುವಾಗ ಆ ಕಾಯಿ ಒಡೆಯದೇ ಹೋದಲ್ಲಿ ಆ ದಾಂಪತ್ಯ ಜೀವನ ಕೊನೆಯತನಕ ಉಳಿಯು ವುದಿಲ್ಲ ಎಂಬ ನಂಬಿಕೆಯಿದೆ. ಹಾಗೆಯೇ ಫಿಜಿಯನ್ನರಲ್ಲಿಯೂ ರೋಗದಿಂದ ಬಳಲುವ ವ್ಯಕ್ತಿಯ ಮುಂದೆ ಇನ್ನೊಬ್ಬ ವ್ಯಕ್ತಿ ತೆಂಗಿನಕಾಯಿಯನ್ನು ಹಿಡಿದು ತಿರುಗಿಸುತ್ತಾನೆ. ಆ ಕಾಯಿ ಪೂರ್ವಕ್ಕೆ ಬಿದ್ದರೆ ಆ ಕಾಯಿಲೆಯ ವ್ಯಕ್ತಿ ಗುಣಮುಖವಾಗುತ್ತಾನೆ ಎಂತಲೂ, ಪಶ್ಚಿಮಕ್ಕೆ ಬಿದ್ದರೆ ಆತನು ಸಾಯುತ್ತಾನೆ ಎಂತಲೂ ಬಲವಾದ ನಂಬಿಕೆಯಿದೆ. ಹಾಗೆಯೇ ಕರ್ನಾಟಕದಲ್ಲಿಯೂ ನೆಲದ ನೀರಿನ ಪ್ರಮಾಣವನ್ನು ನಿರ್ಣಯ ಮಾಡುವಾಗ ತೆಂಗನ್ನು ಬಳಸಲಾಗುತ್ತದೆ. ಜಲರೇಖೆ ನಿರ್ಣಯದಂತಹ ಸಂದರ್ಭದಲ್ಲಿ ವ್ಯಕ್ತಿಯೊಬ್ಬ ತನ್ನ ಅಂಗೈ ಮೇಲೆ ಸುಲಿದ ತೆಂಗಿನಕಾಯಿ ಇಟ್ಟು ಆ ಜಮೀನ ಒಳಗೆ ಸುತ್ತುತ್ತಾನೆ. ಜಲ ಅಧಿಕವಾಗಿರುವ ಭಾಗಕ್ಕೆ ಬಂದ ಕೂಡಲೇ ತೆಂಗು ಕೈಯಲ್ಲಿಯೇ ನಿಮಿರಿ ನಿಲ್ಲುತ್ತದೆ ಎಂಬ ನಂಬಿಕೆ ಮತ್ತು ನಂಬಿಕೆಗೆ ತಕ್ಕ ಆಚರಣೆ ಇಂದಿಗೂ ಬಳಕೆಯಲ್ಲಿದೆ. **ತೆಂಗಿನ ಗರಿ ಬಿದ್ದು ಸತ್ತವರಿಲ್ಲ, ಅಡಕೆ ಗರಿ ಬಿದ್ದು ಉಳಿದವರಿಲ್ಲ** ಎಂಬ ನಂಬಿಕೆ ಜನಪದರಲ್ಲಿ ಇಂದಿಗೂ ಇದೆ. ಅಡಕೆಯ ನಾಶ ಗುಣವನ್ನು, ತೆಂಗಿನ ತಾಳುವಿಕೆಯ ಶಕ್ತಿ ಸಾಮರ್ಥ್ಯವನ್ನು ಈ ಮಾತು ಧ್ವನಿಸುತ್ತದೆ. ಈ ಮಾತನ್ನು ಸಮರ್ಥಿಸುವಂತೆ ಸಂಜಲೀಸ್ ಜನರು ತೆಂಗಿನ ಬಗೆಗೆ ಇದೇ ಬಗೆಯ ನಂಬಿಕೆಯನ್ನು ಹೊಂದಿದ್ದು, ದೈವಶಕ್ತಿಯ ಅಸಂತುಷ್ಟಿ ಗೊಳಿಸಿದ ಹೊರತು ತೆಂಗಿನಕಾಯಿಯಿಂದ ಎಣ್ಣೆ ಬರುತ್ತದೆ ಎಂಬ ಬಲವಾದ ನಂಬಿಕೆ ಮಿಂಡೊರೋ ಜನರದ್ದು.

**ದೇ**ವರಿಗೆ ತೆಂಗಿನಕಾಯಿ ಹೊಡೆಯುವುದು ಬಲಿಯ ಸಂಕೇತವೆಂದು ಭಾವಿಸುವುದರ ಜೊತೆಗೆ ತೆಂಗನ್ನು ಶಿವನ ರೂಪವೆಂತಲೇ ಕರೆಯಲಾಗಿದೆ. ಹಾಗಾಗಿ ತೆಂಗನ್ನು ಮುಕ್ಕಣ್ಣ, ಕಲ್ಪವೃಕ್ಷ ಮುಂತಾಗಿಯೂ ಕರೆಯುತ್ತಾರೆ. ಬ್ರಾಹ್ಮಣರಿಗೆ ದಾನ ಕೊಡುವಾಗ, ಮದುವೆಗೆ ಬಂದ ಅತಿಥಿಗಳಿಗೆ ತಾಂಬೂಲ ಕೊಡುವಾಗ, ಮುತ್ತೈದೆಯರಿಗೆ ಭಾಗಿನ ಕೊಡುವಾಗ ಹರಿಶಿನ-ಕುಂಕುಮದ ಜೊತೆಯಲ್ಲಿ ತೆಂಗಿನಕಾಯಿಯನ್ನು ಕೊಡುವುದು ಜನಪದರ ನಂಬಿಕೆಯಾಗಿದೆ. ಹೀಗೆ ಕೊಡುವುದರಿಂದ ಆ ಮನೆಯ ಪ್ರಗತಿ, ಹರ್ಷಾನಂದ ಜೊತೆಗೆ ಆ ಮನೆಯ ಹೆಂಗಸರು ಶಾಶ್ವತ ಮುತ್ತೈದೆಯರಾಗುತ್ತಾರೆ ಎಂಬ ನಂಬಿಕೆಯೂ ಜನಪದರಲ್ಲಿದೆ. ಹಾಗಾಗಿಯೇ ವರಮಹಾಲಕ್ಷ್ಮಿ, ಗೌರಿ, ತುಳಸಿ ಹಬ್ಬಗಳಂದು ತೆಂಗಿನಕಾಯಿ, ಬಳೆ, ಅರಿಶಿನ- ಕುಂಕುಮ ನೀಡುವ ನಂಬಿಕೆ ಇದೆ. ಮದುವೆಯಲ್ಲಿ ವಧು-ವರರಿಗೆ ಧಾರೆಯೆರೆಯುವಾಗ ಕೈಯಲ್ಲಿ ತೆಂಗಿನಕಾಯಿ ಇಟ್ಟು ಹಾಲು ಎರೆಯುವುದು ಜನಪದರ ಸಂಪ್ರದಾಯವಾಗಿದೆ. ಇದೊಂದು ಶುಭದ, ಸತ್ಯದ, ಪ್ರಾಮಾಣಿಕತೆಯ ಪರಿಕಲ್ಪನೆಯಾಗಿ ಮನುಷ್ಯ ಜೀವನದ ಪರಮಪವಿತ್ರವಾಗಿ ಶ್ರೇಷ್ಠತೆಯ ಕಲ್ಪನೆಯಾಗಿ ಜನಪದರಲ್ಲಿ ಉಳಿದುಬಂದಿದೆ.

**ಹೆ**ಣ್ಣಿಗೆ ಉಡಿ ತುಂಬುವ, ಕುಲ ಸಂಬಂಧಿ ವೀಳ್ಯ ಎತ್ತುವ, ಬ್ರಾಹ್ಮಣರಲ್ಲಿ ಗಂಡನ್ನು ಕಾಶಿಯಾತ್ರೆಗೆ ಹೊರಡಿಸುವ ಸಂದರ್ಭ ಗಳಲ್ಲಿಯೂ ತೆಂಗು ಪ್ರಧಾನ ಪಾತ್ರ ವಹಿಸುತ್ತದೆ. ಹಾಗೆ

ಇರಲೇಬೇಕೆಂಬ ನಂಬಿಕೆ ಜನಪದರದ್ದು. ಹೀಗೆ ವರ್ಗಾತೀತವಾಗಿ ಜನಪದರು ಭಾವನಾತ್ಮಕ ಸಂಬಂಧವಾಗಿ, ನಂಬಿಕೆಯಾಗಿ, ತೆಂಗು ಗಾದೆಯಾಗಿ, ಒಗಟಾಗಿ, ಹಾಡಾಗಿ, ಜನಪದರ ಮನದಾಳದಲ್ಲಿ ನೆಲೆನಿಂತಿದೆ. ತೆಂಗು, ಇಂಗು ಎರಡೂ ಇದ್ದರೆ ಮಂಗಮ್ಮನೂ ಕೂಡ ಅಡುಗೆ ಮಾಡಬಲ್ಲಳು ಎಂಬ ಭಾವನೆಯೂ ಬಲವಾಗಿದೆ. ಕಲ್ಪವೃಕ್ಷಕ್ಕೆ ಸಮಾನವಾದ ತೆಂಗು, ದೇವಸ್ಥಾನಗಳಲ್ಲಿ ಎಳನೀರು ತೀರ್ಥವಾಗಿ, ಅದು ಮನೆಮಂದಿಗೆಲ್ಲಾ ಪ್ರಸಾದವಾಗಿ, ಅದೇ ಪ್ರಸಾದವನ್ನು ಮನೆಯ ಕುರಿ, ದನ, ದವಸ, ಧಾನ್ಯ ಕೆಲವೊಮ್ಮೆ ಹೊಲಗದ್ದೆಗಳಿಗೂ ತೀರ್ಥ ಎರಚುವ ನಂಬಿಕೆ ಜನಪದರಲ್ಲಿದೆ. ಅಂತೆಯೇ ಹುಟ್ಟಿದ ಪ್ರತಿಯೊಬ್ಬರೂ ಸಾಯಲೇಬೇಕು. ಸಾಯುವ ಹಂತದಲ್ಲಿರುವ ವ್ಯಕ್ತಿಯ ಬಾಯಿಗೆ ಪವಿತ್ರ ತೆಂಗಿನ ನೀರನ್ನು ಬಿಟ್ಟಾಗ ಸ್ವರ್ಗಕ್ಕೆ ಹೋಗುತ್ತಾನೆಂಬ ನಂಬಿಕೆಯೂ ಇದೆ. ತೆಂಗಿನ ಮರವನ್ನು ಹತ್ತುವಾಗ, ಇಳಿಯುವಾಗ ಅದನ್ನು ಮುಟ್ಟಿ ಎರಡು ಕೈಗಳಿಂದಲೂ ನಮಸ್ಕರಿಸುವ ಸಂಪ್ರದಾಯ ಈ ಮೂಲಕ ತೆಂಗಿಗೆ ದೈವತ್ವವನ್ನು ನೀಡಿದ್ದಾರೆ. ಕಳಸ ಪೂಜೆಯ ಸಂದರ್ಭದಲ್ಲೂ ಅಕ್ಕಿ ತುಂಬಿದ ಚೆಂಬಿನ ಮೇಲೆ ತೆಂಗಿನಕಾಯಿ ಇಡುವುದು, ಅದೇ ದೇವರು ಎಂದು ಭಾವಿಸುವುದು ಶಿಷ್ಟ ಸಂಪ್ರದಾಯಗಳಲ್ಲಿ (ಉತ್ತರ ಭಾರತದಲ್ಲಿ) ವ್ಯಾಪಕವಾಗಿ ಕಂಡು ಬರುತ್ತದೆ.

ದೇವರ ಕಾರ್ಯಗಳಲ್ಲಿ ತೆಂಗಿನಕಾಯಿಯನ್ನು ಒಡೆದಾಗ ಆ ಕಾಯಿ ಅಡ್ಡವಾಗಿ ಹೊಡೆಯುವದು ಸ್ವಾಭಾವಿಕ. ಅದರಲ್ಲಿ ವಿಶೇಷವೇನಿಲ್ಲ, ಅದರೆ ತುದಿಯಿಂದ ಜುಟ್ಟಿನವರೆಗೆ ತೊಟ್ಟಿಲಾಕಾರದಲ್ಲಿ ಒಡೆದರೆ ಅದನ್ನು ತೊಟ್ಟಿಲುಗಾಯಿ ಎಂತಲೂ ಅದು ಮಕ್ಕಳಾಗುವ ಶುಭ ಸೂಚಕ ಎಂದು ನಂಬುತ್ತಾರೆ. ಇದರಲ್ಲಿ ನಂಬಿಕೆಗಳು ಪ್ರಾದೇಶಿಕವಾಗಿ ಭಿನ್ನವಾಗಿವೆ. ಕರ್ನಾಟಕದ ಮಲೆನಾಡು ಹಾಗೂ ಉತ್ತರ ಕರ್ನಾಟಕದ ಭಾಗಗಳಲ್ಲಿ ಉದ್ದವಾಗಿ ಸೀಳಿದಂತೆ ಒಡದರೆ ಅಶುಭ ಎಂಬ ಭಾವನೆಯೂ ಇದೆ. ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಭೂತಾರಾಧನೆ ಇಂದಿಗೂ ಜನಪ್ರಿಯ ಆಚರಣೆಯಾಗಿದ್ದು ಆ ಸಂದರ್ಭದಲ್ಲಿ ಒಬ್ಬ ಒಂದು ಕಾಯಿಯನ್ನು ನೆಲದ ಮೇಲಿಟ್ಟು ಎರಡು ಕೈಗಳಿಂದ ಹಿಡಿದುಕೊಳ್ಳುತ್ತಾನೆ. ಇನ್ನೊಬ್ಬ ಮೇಲಿಂದ ಇನ್ನೊಂದು ಕಾಯಿಯಿಂದ ಅದೇ ಕಾಯನ್ನು ಒಡೆಯುತ್ತಾನೆ. ಹೀಗೆ ಒಡೆದಾಗ ಯಾರ ಕಾಯಿ ಬೇಗ ಒಡೆಯುವುದೋ ಅಂತಹವನು ಸೋತ ಎಂತಲೂ, ಗೆದ್ದವರಿಗೆ ಕಾಣಿಕೆ ಕೊಡಬೇಕೆಂಬ ನಂಬಿಕೆ ಇದೆ. ಅಂತೆಯೇ ಕುರುಬರ ಧಾರ್ಮಿಕ ಆಚರಣೆಗಳಲ್ಲಿ ತಲೆಯಿಂದ ತೆಂಗಿನಕಾಯಿಯನ್ನು ಒಡೆಯುವುದು ಒಂದು ರೂಢಿಯಾಗಿದೆ. ಹಾಗೇ ಒಡೆದಾಗ ಒಂದೇ ಒಡೆತಕ್ಕೆ ಚೂರಾದರೆ ಆತನು ಸತ್ಯವಂತನೆಂದು, ನಿಜವಾದ ಭಕ್ತನೆಂದು ಇಲ್ಲದೇ ಹೋದಲ್ಲಿ ಏನಾದರೂ ಅಂಟು ಮುಂಟು ಅಗಿದೆ ಎಂತಲೋ ಅಥವಾ ಶೀಲ ಶೌಚಗಳಲ್ಲಿ, ನಡಾವಳಿಗಳಲ್ಲಿ ಅಪನಂಬಿಕೆಯನ್ನು ವ್ಯಕ್ತಪಡಿಸುತ್ತಾರೆ. ದೇವರ ಉತ್ಸವಗಳಲ್ಲಿ ಹೆಜ್ಜೆ ಹೆಜ್ಜೆಗೂ ತೆಂಗಿಸಕಾಯಿ ಒಡೆಯುವುದು ಶುಭವೆಂತಲೂ, ಹಾಗೆ ಒಡೆಯುವುದು ತಮ್ಮ ತಪ್ಪುಗಳನ್ನು ಕಳೆದು ಕೊಳ್ಳುವುದರ ಸಂಕೇತವೆಂದು, ಇದರಿಂದ ದೇವರು ಸಂತೃಪ್ತಗೊಳ್ಳುತ್ತಾನೆಂದು ಭಾವಿಸುತ್ತಾರೆ.

ಮನೆಯ ಶಾಂತಿಗಾಗಿ ಒಣಗಿದ ತೆಂಗಿನಕಾಯಿಯನ್ನು ಮಂತ್ರಿಸಿ ಅಥವಾ ದೇವರ ಸನ್ನಿಧಿಯಿಂದ ತಂದು ಆರಶಿನದ ಬಟ್ಟೆಯಲ್ಲಿ ಕಟ್ಟಿ ಮನೆಯ ಸುರಕ್ಷಿತ ಸ್ಥಳದಲ್ಲಿ ಆಥವಾ ಪ್ರವೇಶ ದ್ವಾರದಲ್ಲಿ ಕಟ್ಟುವ ಸಂಪ್ರದಾಯ ಜನಪದರಲ್ಲಿ ನಂಬಿಕೆಯಾಗಿ ರೂಪುಗೊಂಡಿದೆ. ಹೀಗೆ ಕಟ್ಟುವುದುರಿಂದ ಆ ಮನೆಗೆ ಕೆಟ್ಟ ಕಣ್ಣು, ಮಾಟ, ಮಂತ್ರ, ಕುತಂತ್ರ ಈ ಬಗೆಯ ದುಷ್ಟ ಶಕ್ತಿಗಳಿಂದ ತಪ್ಪಿಸಿಕೊಳ್ಳಬಹುದು ಎಂಬ ಬಲವಾದ ನಂಬಿಕೆ. ಹೊಸ ಮನೆಯ ಪ್ರವೇಶೋತ್ಸವ ಸಂದರ್ಭದಲ್ಲಿ ಮನೆಯ ನಾಲ್ಕು ಮೂಲೆಗೂ ನಾಲ್ಕು ತೆಂಗಿನಕಾಯಿಯನ್ನು ಹೂಳುವ ಆಥವಾ ತೆಂಗಿನಕಯಿಯನ್ನು ಒಡೆದು ಹಾಕುವ ಆಥವಾ ಹೊಸ ಮನೆಯ ಪ್ರವೇಶ ಸಂದರ್ಭದಲ್ಲಿ ನವಗ್ರಹ ಪೂಜೆಯ ಸಂದರ್ಭದಲ್ಲಿ ಒಂಭತ್ತು ಕಾಯಿಗಳನ್ನು ಇಟ್ಟು ಅದೇ ಕಾಯಿಗಳನ್ನು ಪೂಜೆ ತರುವಾಯ ಬ್ರಾಹ್ಮಣರಿಗೆ ದಾನ ಮಾಡಬೇಕೆಂಬ ನಂಬಿಕೆಯೂ ಜನಪದರಲ್ಲಿದೆ. ತೆಂಗಿನ ಕೃಷಿಯನ್ನು ಕುರಿತ ನಂಬಿಕೆಯು ಜನಪದರಲ್ಲಿ ಅಪಾರವಾಗಿದೆ. ತೆಂಗಿನಕಾಯಿಯನ್ನು ರಾತ್ರಿಯಲ್ಲಿ ಕೀಳಬಾರದೆಂದು, ತೆಂಗಿನ ಮರವನ್ನು ರಾತ್ರಿ ವೇಳೆಯಲ್ಲಿ ಹತ್ತಬಾರದೆಂದು, ತೆಂಗಿನಕಾಯಿಯನ್ನು ಕದ್ದು ಕೀಳಬಾರದೆಂಬ ನಂಬಿಕೆಯಿದೆ. ತೆಂಗಿನ ಗರಿ ಯಾರ ಮೇಲೆಯೂ ಬೀಳುವುದಿಲ್ಲ. ಒಂದು ವೇಳೆ ಅದು ಬಿದ್ದರೂ ಕೂಡ ಆತ ಅದೃಷ್ಟಶಾಲಿ ಎಂದು ಭಾವಿಸುವ ಜನ, ತೊನ್ನು ರೋಗಿಯನ್ನು ನೋಡುವುದು ಪಾಪಕರ ಎಂತಲೂ, ಹಾಗೆ ನೋಡಿದ ಕೂಡಲೇ ತೆಂಗಿನಮರವನ್ನು ನೋಡಿದರೆ ಪಾಪ ಪರಿಹಾರವಾಗುತ್ತದೆ ಎಂಬ ನಂಬಿಕೆಯೂ ಜನಪದರಲ್ಲಿ ಇಂದಿಗೂ ಇದೆ.

ಈಡುಗಾಯಿ ಒಡೆಯುವುದು ಒಂದು ಬಗೆಯದಾದರೆ, ಈಡುಗಾಯಿ ತೆಗೆಯುವುದು ಇನ್ನೊಂದು ಬಗೆಯ ನಂಬಿಕೆಯಾಗಿದೆ. ಗಾಳಿ, ದೆವ್ವ, ಮಾಟ, ಮಂತ್ರದ ಹೆಸರಲ್ಲಿ ಈಡುಗಾಯಿ ತೆಗೆಸುವ ಪದ್ಧತಿ ತುಮಕೂರು ಜಿಲ್ಲೆಯ ಚಿಕ್ಕನಾಯ್ಕನಹಳ್ಳಿಯ ತಾಲ್ಲೂಕಿನ ಕರಿಯಮ್ಮ, ಕುಣಿಗಲ್ ತಾಲ್ಲೂಕಿನ ಅಟ್ಟಿಲಕ್ಕಮ್ಮ, ಸಿರಾ ತಾಲ್ಲೂಕಿನ ಪುರ್ಲೆಹಳ್ಳಿ ಭೂತಪ್ಪ, ಸಾಕ್ಷಿಹಳ್ಳಿ ಮಣ್ಣಮ್ಮ, ಗುಬ್ಬಿ ತಾಲ್ಲೂಕಿನ ಮಾದಾಪುರ ಗ್ರಾಮದ ಮಣ್ಣಮ್ಮ, ಸಾಗಸಂದ್ರದ ಕೆಂಪಮ್ಮ ಈ ದೇವತೆಯ ಗರ್ಭಗುಡಿಯ ಹೊರಗೆ ನಿಂತು ಗಾಳಿ, ಪೀಡೆಗೆ ಒಳಗಾದ ವ್ಯಕ್ತಿಗೆ ತೆಂಗಿನಕಾಯಿಯನ್ನು ನೀವಳಿಸಿ, ಆ ತೆಂಗಿನಕಾಯಿಯನ್ನು ದೇವತೆಯ ಎದುರಿಗೆ ಉರುಳಿ ಬಿಡುವುದು. ಈ ಬಗೆಯ ನೀವಳಿಸಿ ಬಿಟ್ಟ ಆ ತೆಂಗಿನಕಾಯಿಯಿಂದ ರೋಗಪೀಡಿತ ವ್ಯಕ್ತಿ ತನ್ನ ರೋಗದಿಂದ ಮುಕ್ತನಾಗಿ, ದೇವತೆಯ ಶಕ್ತಿ ಆ ದುಷ್ಟ ಶಕ್ತಿಯನ್ನು ಅಡಗಿಸುತ್ತದೆ ಎಂಬ ನಂಬಿಕೆ ಜನಪದರಲ್ಲಿ ಬಲವಾಗಿದೆ. ಬಯಲುಸೀಮೆಯ ಹಳ್ಳಿಗಳಲ್ಲಿ ಮದುವೆ, ದೇವರ ಉತ್ಸವಗಳಲ್ಲಿ ಹಸಿರು ವೀಳ್ಯ ಕೊಡುವ ಪದ್ಧತಿ ಇಂದಿಗೂ ಇದೆ. ಮಲೆನಾಡಿನಲ್ಲಿ ಜಾತ್ರೆಯಲ್ಲಿ ಕಾಯಿ ವೀಳ್ಯ ಕೊಡುವ ನಂಬಿಕೆ ಚಿಕ್ಕಮಗಳೂರು ಸಮೀಪದ ಕುಂಬ್ರಿಯ ಮಳ್ಳೂರಮ್ಮನ ಜಾತ್ರೆಯಂದು ತೆಂಗಿನಕಾಯಿಯನ್ನು ಆರಮನೆ ಗುರುಮನೆ, ಮಠಮನೆ, ಗಡಗಲ ನಾಡು, ಉಣುಗಲ ನಾಡು, ಬಿದಿರು ನಾಡು, ಐದುರು ನಾಡು, ಹೊರನಾಡು, ಊರ ನೆಂಟರು, ಕೊನೆಗೆ ಅರಿತು ಮರೆತದ್ದು ಹೀಗೆ ಹತ್ತು ಮನೆತನಕ್ಕೆ ಕಾಯಿ ವೀಳ್ಯ ಕೊಡುವ ನಂಬಿಕೆ ಇಂದಿಗೂ ಬಳಕೆಯಲ್ಲಿದೆ. ಕಾಯಿಯ ಜುಟ್ಟು ತೆಗೆದ, ನೀರಿಲ್ಲದ ಕಾಯನ್ನು ದೇವರಿಗೆ ಒಡೆಯಬಾರದು ಇಂಬ ನಂಬಿಕೆ ಒಂದು ಬಗೆಯದಾದರೆ, ದಕ್ಷಿಣ ಕರ್ನಾಟಕದ ಧರ್ಮಸ್ಥಳದ ಮಂಜುನಾಥನಿಗೆ ಜುಟ್ಟೇ ಇಲ್ಲದ ತೆಂಗಿನಕಾಯಿಯನ್ನು ಒಡೆಯುವ ನಂಬಿಕೆ ಇಂದಿಗೂ ಚಾಲ್ತಿಯಲ್ಲಿದೆ.

ಅಗ್ನಿಕುಂಡಕ್ಕೆ ಕಾಯಿ ಒಡೆದು ಎಳನೀರನ್ನು ಹಾಕುವ ಮೂಲಕ ಅಗ್ನಿಕುಂಡಕ್ಕೆ ಪ್ರವೇಶ. ಮಗು ಮೊದಲ ಬಾರಿಗೆ ಹೊಸ್ತಿಲು ದಾಟಿದರೆ ಕಾಯಿ ಒಡೆದು ಶಾಂತಿ ಮಾಡಬೇಕೆಂಬ ನಂಬಿಕೆಯಿದೆ. ಬಾಳೆಗೆ ಆರು ತಿಂಗಳು, ತೆಂಗಿಗೆ ಅರವತ್ತು ವರ್ಷ. ಬಾಳೆ ಬೆಳೆದು ಬದುಕಿದವರಿಲ್ಲ, ತೆಂಗು ನಂಬಿ ಕೆಟ್ಟವರಿಲ್ಲ. ಈ ಬಗೆಯ ನಂಬಿಕೆಗಳು ಜನಪದ ಗಾದೆಗಳಾಗಿರುವುದನ್ನು ಕಾಣಬಹುದು. ಕೊಡಗಿನಲ್ಲಿ ತೆಂಗೋತ್ಸವ ಎಂಬ ವಿಶಿಷ್ಟ ಆಚರಣೆ ಜಾರಿಯಲ್ಲಿದೆ. ಕೊಡಗಿನ ಭದ್ರಕಾಳಿ ಉತ್ಸವದಲ್ಲಿ ಪ್ರತಿ ವರ್ಷವೂ ತೆಂಗೋತ್ಸವವನ್ನು ಆಚರಿಸಲಾಗುತ್ತದೆ. ಆ ದೇವರ ವಿಶಿಷ್ಟ ಅಚರಣೆಯೆಂದರೆ ತಲೆಯ ಮೇಲೆ ತೆಂಗಿನಕಾಯಿಯನ್ನು ಒಡೆಸಿಕೊಳ್ಳುವ ಪದ್ಧತಿಯೂ ಇದೆ. ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಹರ್ತಿಕೋಟೆಯ ಶ್ರೀ ವೀರಭದ್ರ ದೇವರ ಜಾತ್ರೆಯ ಸಂದರ್ಭದಲ್ಲಿ ವ್ಯಕ್ತಿಯೊಬ್ಬ ತನ್ನ ಕುಂಡಿಯಿಂದಲೇ ಕಾಯಿಯನ್ನು ಒಡೆಯುವ ಪದ್ವತಿಯಿದ್ದು ನೆಲದ ಮೇಲೆ ತೆಂಗಿನಕಾಯಿಯನ್ನು ಇಟ್ಟು ವ್ಯಕ್ತಿ ಅದರ ಮೇಲೆ ಕುಂಡಿ ಊರಿದ ಕೂಡಲೇ ಆ ಕಾಯಿ ಜಜ್ಜಿ ಹೋಗುತ್ತದೆ. ಇದು ದೇವರ ಪವಾಡವೆಂದು ಆ ಭಾಗದ ಜನ ನಂಬುತ್ತಾರೆ. ವೀರಭದ್ರನ ಕುಣಿತದಲ್ಲಿ ಲಿಂಗದ ಬೀರರು ತೂರಿ ಬರುವ ತೆಂಗಿನಕಾಯಿಯನ್ನು ಖಡ್ಗದಿಂದಲೇ ಕತ್ತರಿಸುವ ಇದೊಂದು ಚಮತ್ಕಾರವನ್ನು ಕಾಣಬಹುದು. ತೆಂಗು ಜನಪದ ಔಷಧವಾಗಿಯೂ ಮಹತ್ವದ ಸ್ಥಾನ ಪಡೆದಿದೆ. ಇಲ್ಲಿ ಮೂರು ವಿಧದಲ್ಲಿ ತೆಂಗನ್ನು ಬಳಸಲಾಗುತ್ತದೆ. ತುಂಬುಗೆರೆ, ಅರಗೆರೆ, ಬರಗೆರೆ. ಅಂದರೆ ಎಳನೀರು, ಹಣ್ಣುಗಾಯಿ, ಕೊಬ್ಬರಿ ಈ ಮೂರು ಹಂತಗಳಲ್ಲೂ ಒಂದೊಂದು ಬಗೆಯ ಶುಭ ಕಾರ್ಯಕ್ಕೆ ಬಳಸಬೇಕೆಂಬ ನಂಬಿಕೆ ಜನಪದರಲ್ಲಿದೆ. ಎಳನೀರು ಕೆಸರಲ್ಲಿ ಹೂತು ಪ್ರಾತಃಕಾಲ ಕಲ್ಲುಸಕ್ಕರೆಯೊಂದಿಗೆ ಕುಡಿದರೆ ಉಷ್ಣತಾಪ ಕಡಿಮೆಯಾಗಿ ಆರೋಗ್ಯ ವೃದ್ದಿಸುತ್ತದೆಂಬ ನಂಬಿಕೆ, ಎಳನೀರಿಗೆ ಪಪ್ಪಾಯಿ ಹಣ್ಣು ಸೇರಿಸಿ ಕುಡಿಯುವುದರಿಂದ ಜಠರದ ಹುಣ್ಣುಗಳಿಗೆ ಸಂಬಂಧಿಸಿದ ಕಾಯಿಲೆ ವಾಸಿಯಾಗುತ್ತದೆಂಬ ನಂಬಿಕೆ, ಎಳನೀರನ್ನು ದೈನಂದಿನ ಬದುಕಿನಲ್ಲಿ ಬಳಸುತ್ತಾ ಹೋದರೆ ಸರ್ವ ರೋಗಗಳು ನಾಶವಾಗುತ್ತದೆಂಬ ನಂಬಿಕೆ ಇಂದಿಗೂ ಜನಪದರಲ್ಲಿದೆ. ಹೆಣ್ಣು ಋತುಮತಿಯಾದಾಗ ಕೊಬ್ಬರಿಯನ್ನು ತಿನ್ನಲು ಕೊಡಬೇಕೆಂಬ ನಂಬಿಕೆಯನ್ನು ಇದರೊಂದಿಗೆ ಬೆಲ್ಲವನ್ನೂ ಕೊಡುವ ಪದ್ದತಿ ಇಂದಿಗೂ ಗ್ರಾಮೀಣರಲ್ಲಿ ದಟ್ಟವಾಗಿದೆ. ಹಾಗೆಯೇ ಮಡಿಲು ತುಂಬುವಾಗ ಅಕ್ಕಿಯ ಜೊತೆಗೆ ಕೊಬ್ಬರಿಯ ಬಟ್ಟಲನ್ನು ಕೊಡುವ ಸಂಪ್ರದಾಯ ನಂಬಿಕೆಯ ರೂಪವನ್ನು ಪಡೆದುಕೊಂಡಿದೆ.

ತೆಂಗು ಫಲ ಬಿಡಲು ಆರಂಭಿಸುವ ಮೊದಲ ಹಂತ ಹೊಂಬಾಳೆ ಒಡೆಯುವುದು. ಇದೊಂದು ರೈತಾಪಿ ಬದುಕಿನ ಸಂಭ್ರಮದ, ಸಂತಸದ ಹಂತ. ಹೀಗೆ ಹೊಂಬಾಳೆ ಒಡೆದುದುನ್ನು ಕಂಡವನು ಶಾಂತಿ ಮಾಡಿಕೊಳ್ಳಬೇಕೆಂಬ ನಂಬಿಕೆಯೂ ಜನಪದರಲ್ಲಿದೆ. ಆದಕ್ಕೆ ಪೂರಕವಾಗಿ ತೋಟದ ದೇವರು ಎಂದೇ ಕರೆಯುವ ಆಚರಣೆಯಲ್ಲಿ ಮರಿಯನ್ನು ಬಲಿಗೊಟ್ಟು ಊಟ ಹಾಕಿಸುವ ಈ ಮೂಲಕ ಶಾಂತಿ ಮಾಡಿಕೊಳ್ಳುವ ನಂಬಿಕೆ ಜನಪದರಲ್ಲಿದೆ.

*ಹಾಡಿ ಬಾ ನನ್ನ ಕಂದ ಅಂಗಾಲ ತೊಳೆದನು*
*ತೆಂಗಿನಕಾಯಿ ತಿಳಿನೀರು ತಕ್ಕೊಂಡು*
*ಬಂಗಾರ ಮೋರೆ ತೊಳೆದೇನು*

ಇದೊಂದು ಸುಂದರವಾದ ಜನಪದ ತ್ರಿಪದಿ. ಇದು ಜನಪದರು ತೆಂಗಿನ ಬಗೆಗೆ ಹೊಂದಿರುವ. ಈ ಮೂಲಕ ತೆಂಗು ಜನಪದರ ಮೇಲೆ ಬೀರಿರುವ ಪ್ರಭಾವವನ್ನು ಪ್ರೇರಣೆಯನ್ನು ತೆಂಗಿನ ಬಗೆಗಿಟ್ಟ ಭಕ್ತಿ, ಗೌರವ ಭಾವನೆಯನ್ನು ಈ ಪುಟ್ಟ ತ್ರಿಪದಿ ಅರ್ಥಪೂರ್ಣವಾಗಿ ಧ್ವನಿಸುತ್ತಿದೆ.

❀



# ವೈದ್ಯರಲ್ಲಿ ನಂಬಿಕೆ ಇಡಿ; ವೈದ್ಯರ ಮಾತು ಪಾಲಿಸಿ

– ಡಾ. ಎಂ.ಎಸ್. ರಾಜಣ್ಣ
ಪ್ರಾಧ್ಯಾಪಕರು, ಸಮುದಾಯ ವೈದ್ಯಶಾಸ್ತ್ರ ವಿಭಾಗ,
ಕೆಂಪೇಗೌಡ ಮೆಡಿಕಲ್ ಕಾಲೇಜು, ಬೆಂಗಳೂರು.

"ವೈದ್ಯರ ಹತ್ತಿರ, ವಕೀಲರ ಹತ್ತಿರ ಸುಳ್ಳು ಹೇಳಬಾರದು" ಎಂಬುದು ಹಿರಿಯರ ಮಾತು. ಹೌದು. ವೈದ್ಯರ ಹತ್ತಿರ ಸುಳ್ಳು ಹೇಳಬಾರದು. ವೈದ್ಯರಲ್ಲಿ ನಂಬಿಕೆ ಇಡಬೇಕು. ವೈದ್ಯರು ರೋಗಿಯನ್ನು ಸಂಪೂರ್ಣವಾಗಿ ಪರೀಕ್ಷಿಸುತ್ತಾರೆ. ರೋಗಲಕ್ಷಣಗಳ ವಿವರ ಪಡೆಯುತ್ತಾರೆ. ಚಿಕಿತ್ಸೆ ಬಗ್ಗೆ ಸಲಹೆ ನೀಡುತ್ತಾರೆ. ರೋಗಿಯು ತನ್ನ ಸಲಹೆಯನ್ನು ಪಾಲಿಸುತ್ತಾನೆಂದು ನಂಬುತ್ತಾರೆ. ಕೆಮ್ಮು, ಜ್ವರ, ಎದೆ ನೋವು, ಕಫದಲ್ಲಿ ರಕ್ತ. ವೈದ್ಯರು ಕಫ ಪರೀಕ್ಷೆ, ಎಕ್ಸ್‌ರೇ ಮಾಡಿಸಿದರು. ಕ್ಷಯರೋಗ ಎಂದು ಖಚಿತವಾಯಿತು. ಆರು ತಿಂಗಳು ಚಿಕಿತ್ಸೆ ಬಗ್ಗೆ ಸಲಹೆ ನೀಡಿದರು. ಆದರೆ ರೋಗಿ ಚಿಕಿತ್ಸೆ ಪಡೆದಿದ್ದು ೧೫ ದಿನಗಳು ಮಾತ್ರ. ಕಾರಣ ಗೊತ್ತೆ? ೧೫ ದಿನಗಳಿಗೆ ಜ್ವರ ಕಡಿಮೆಯಾಯಿತು. ಆರು ತಿಂಗಳ ಚಿಕಿತ್ಸೆ ಬೇಕಿಲ್ಲ. ಇದು ರೋಗಿಯ ತೀರ್ಮಾನ. ಪುನಃ ೨ ತಿಂಗಳ ನಂತರ ರೋಗ ಉಲ್ಬಣಗೊಂಡಾಗ ವೈದ್ಯರಿಗೆ ಆಶ್ಚರ್ಯ ! ಚಿಕಿತ್ಸೆ ಪಡೆಯುತ್ತಿದ್ದರೂ ಸಹ ರೋಗ ಉಲ್ಬಣಗೊಂಡ ಬಗ್ಗೆ, ಕಾರಣಗಳ ಬಗ್ಗೆ ಹುಡುಕಾಟ. ಕೊನೆಗೆ ತಿಳಿಯಿತು. ರೋಗಿ ಚಿಕಿತ್ಸೆ ನಿಲ್ಲಿಸಿದ್ದಾನೆ. ಇಂತಹ ಉದಾಹರಣೆಗಳು ಹಲವಾರು. ವೈದ್ಯರ ಸಲಹೆಯನ್ನು ಕಿವಿಗೊಟ್ಟು, ತಾಳ್ಮೆಯಿಂದ, ಶಾಂತಿಯಿಂದ ಕೇಳಬೇಕು. ತಿಳಿದುಕೊಳ್ಳಬೇಕು. ಕೆಲವು ವಿಷಯ ಗೊತ್ತಾಗದಿದ್ದರೂ ಸಹ ಗೊತ್ತಾಯಿತು ಎಂಬ ಅಹಂಭಾವ ಬಿಡಬೇಕು.

ಬಹಳಷ್ಟು ಮಂದಿ ವೈದ್ಯರ ಸಲಹೆಗಿಂತ, ಬಂಧು ಮಿತ್ರರ ಸಲಹೆಗೆ ಹೆಚ್ಚು ಮಹತ್ವ ಕೊಡುತ್ತಾರೆ. ಎಲ್ಲ ರೋಗಗಳು ತಕ್ಷಣ ವಾಸಿಯಾಗಬೇಕೆಂದು ಬಯಸುತ್ತಾರೆ. ಉದಾಹರಣೆಗೆ ವೈರಸ್‌ಜ್ವರ ಕಡಿಮೆಯಾಗಲು ಕೆಲವು ದಿನಗಳು ಬೇಕು. ವೈರಸ್‌ಗಳನ್ನು ನಾಶಮಾಡಲು ಆಂಟಿಬಯಾಟಿಕ್ ಔಷಧಿಗಳಿಂದ ಸಾಧ್ಯವಿಲ್ಲ. ರೋಗಿಗೆ ವಿಶ್ರಾಂತಿ, ಪೌಷ್ಠಿಕ ಆಹಾರ ಅಗತ್ಯ. ಆದರೆ ಇವುಗಳನ್ನು ಪಾಲಿಸದೆ ಜ್ವರ ಕಡಿಮೆಯಾಗಲಿಲ್ಲ ಎಂದು ವೈದ್ಯರನ್ನೇ ಬದಲಾಯಿಸುವುದು, ತಾವೇ ಸ್ವಂತ ಚಿಕಿತ್ಸೆ ಮಾಡಿಕೊಳ್ಳುವುದು - ಇದು ಸಾಮಾನ್ಯವಾಗಿ ಕಂಡುಬರುವ ದೃಶ್ಯ. ಇನ್ನೂ ಮಕ್ಕಳ ಆರೋಗ್ಯದ ವಿಷಯದಲ್ಲಿ ಗಾಬರಿ ಹಾಗೂ ಮೂಢನಂಬಿಕೆಗಳು ಹೆಚ್ಚಾಗಿ ಕಂಡುಬರುತ್ತದೆ. ಮಕ್ಕಳಿಗೆ ಜ್ವರ ಬಂದಾಗ ಚಿಟಿಕೆ ಹಾಕುವುದು, ಹೊಟ್ಟೆ ನೋವಿಗೆ ಭೀಕರ ಚಿಕಿತ್ಸಾ ವಿಧಾನಗಳನ್ನು ಇಂದಿಗೂ ಕಾಣಬಹುದು. ಇತ್ತೀಚಿಗೆ ಜೀವನ ಶೈಲಿಯ ಹಾಗೂ ಅದರಿಂದ ಆರೋಗ್ಯದ ಮೇಲೆ ಪರಿಣಾಮವನ್ನು ಹೆಚ್ಚಾಗಿ ಗಮನಿಸಲಾಗುತ್ತಿದೆ. ಬೀಡಿ, ಸಿಗರೇಟು ಸೇದುವುದನ್ನು ನಿಲ್ಲಿಸಿದ್ದೀನಿ. ನಿಲ್ಲಿಸುತ್ತಾ ಇದ್ದೇನೆ. ಕಡಿಮೆ ಮಾಡುತ್ತಾ ಇದ್ದೇನೆ. ಮದ್ಯಪಾನ, ಡ್ರಿಂಕ್ಸ್ ತೆಗೆದುಕೊಳ್ಳುವುದು ಕಡಿಮೆಮಾಡಿದ್ದೇನೆ. ಕಂಪನಿಗೆ ಮಾತ್ರ ತೆಗೆದುಕೊಳ್ಳುತ್ತಿದ್ದೇನೆ - ಇಂತಹ ಸುಳ್ಳು ಮಾತುಗಳನ್ನು ವೈದ್ಯರು ಕೇಳುವುದು ಸಾಮಾನ್ಯವಾಗಿದೆ. ಇನ್ನು ಲೈಂಗಿಕ ರೋಗಿಗಳಲ್ಲಿ ವಿವಾಹಪೂರ್ವ ಹಾಗೂ ವಿವಾಹೇತರ ಲೈಂಗಿಕ ಸಂಪರ್ಕ ನಡೆಸಿದ ಬಗ್ಗೆ ಬಹಳ ಮಂದಿ ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಇಂತಹ ಸಂದರ್ಭಗಳಲ್ಲಿ ವೈದ್ಯರಿಗೆ ರೋಗ ಗುರುತಿಸುವುದು ಕಷ್ಟವಾಗುತ್ತದೆ. ಇನ್ನು ಡಯಾಬಿಟೀಸ್, ರಕ್ತದ ಒತ್ತಡ ರೋಗಿಗಳಿಗೆ ನಿರಂತರವಾದ ಚಿಕಿತ್ಸೆ ಬಗ್ಗೆ ಮನ ಒಲಿಸುವುದು ವೈದ್ಯರಿಗೆ ಸಾಹಸ ಎನಿಸುತ್ತದೆ. ಲೈಂಗಿಕ ಶಕ್ತಿ ಹೆಚ್ಚಿಸಲು ಹೊಸ ಔಷಧಿ, ಮಧುಮೇಹಿಗಳಿಗೆ ಸುವಾರ್ತೆ ಇಂತಹ ಜಾಹೀರಾತುಗಳಿಗೆ ಮರುಳಾಗುತ್ತಾರೆ. ಕೊನೆಗೆ ಇವೆಲ್ಲ ಮೋಸ ಎಂದು ತಿಳಿದಾಗ ಹತಾಶರಾಗುತ್ತಾರೆ.

ತಿಂಗಳಿಗೊಮ್ಮೆ ಡಯಾಬಿಟೀಸ್ ರೋಗಿಗಳು ರಕ್ತಪರೀಕ್ಷೆ, ರಕ್ತದ ಒತ್ತಡ ಪರೀಕ್ಷೆ ಮಾಡಿಸಿಕೊಳ್ಳಬೇಕು ಎಂದು ವೈದ್ಯರು ತಿಳಿಸಿದರೆ ವೈದ್ಯರನ್ನೇ ತಪ್ಪು ತಿಳಿಯುತ್ತಾರೆ ಅಥವಾ ಸಂದೇಹಪಡುತ್ತಾರೆ. ಡಯಾಬಿಟೀಸ್ ವ್ಯಕ್ತಿಗಳ ಆರೋಗ್ಯ, ಒಂದು ದಿನದ ಪ್ರಶ್ನೆಯಲ್ಲ. ಆಹಾರಕ್ರಮ, ವ್ಯಾಯಾಮ, ಔಷಧಿಗಳ ಬಗ್ಗೆ ಸಂಪೂರ್ಣ ವಿವರ ಪಡೆದು ನಿರಂತರವಾಗಿ ಪಾಲಿಸಬೇಕು. "ನೀವೇ ಹೇಳಿದ್ರಲ್ಲ ಡಾಕ್ಟ್ರೆ ! ಪರವಾಗಿಲ್ಲ ಬ್ಲಡ್ ಶುಗರ್ ಹತೋಟಿಯಲ್ಲಿದೆ ಅಂತ. ಅದಕ್ಕೆ ಇನ್ಸುಲಿನ್ ಇಂಜೆಕ್ಷನ್ ನಿಲ್ಲಿಸಿಬಿಟ್ಟೆ, ಬ್ಲಡ್‌ಪ್ರೆಷರ್ ಪರವಾಗಿಲ್ಲ ಎಂದಿರಿ ಅದಕ್ಕೆ ಮಾತ್ರೆ ನಿಲ್ಲಿಸಿಬಿಟ್ಟೆ" ಸ್ವಲ್ಪ ಸುಸ್ತಾಗ್ತ ಇತ್ತು. ಎಲ್ಲೋ ಶುಗರ್ ಕಡಿಮೆ ಆಗಿದೆ ಅಂತ ಇನ್ಸುಲಿನ್ ನಿಲ್ಲಿಸಿಬಿಟ್ಟೆ, ನಮ್ಮ ಸ್ನೇಹಿತರು ಹೇಳಿದ್ರು, ಅವರಿಗೂ ಡಯಾಬಿಟೀಸ್ ಇದೆ. ಸ್ವಲ್ಪ ಸ್ವೀಟ್ಸ್ ತಿಂದರೆ ಏನೂ ಆಗಲ್ಲ ಅದಕ್ಕೆ ಸ್ವೀಟ್ಸ್ ತಿಂದುಬಿಟ್ಟೆ, ಈ ರೀತಿಯ ಪ್ರಕರಣಗಳು ವೈದ್ಯರಿಗೆ ತಲೆನೋವು ತರುವ ವಿಷಯಗಳಾಗಿವೆ.

ಹಲವು ರೋಗದ ಕೆಟ್ಟಪರಿಣಾಮಗಳು ತಕ್ಷಣ ಉಂಟಾಗುವುದಿಲ್ಲ. ಉದಾಸೀನದ ಪರಿಣಾಮ, ಸ್ವಂತ ಚಿಕಿತ್ಸೆ ಅಥವಾ ನಕಲಿ ವೈದ್ಯರ ಸಲಹೆ, ಇವುಗಳಿಂದ ಉಂಟಾಗುತ್ತದೆ. ನಮ್ಮ ಆರೋಗ್ಯ ನಮ್ಮ ಜವಾಬ್ದಾರಿ. ವೈದ್ಯರು ಹೇಳುವುದನ್ನು ಶಾಂತಿಯಿಂದ ಕೇಳಿ, ತಿಳಿದು, ಪಾಲಿಸಿದರೆ ಆರೋಗ್ಯ ಪಾಲನೆ ಸಾಧ್ಯ. ★







# ಶ್ರೀಶೈಲ : ಒಂದು ಪರಿಚಯ

– ಪ್ರೇಮಾ ಮಲ್ಲಣ್ಣ
3ನೇ ಅಡ್ಡರಸ್ತೆ, ಸೋಮೇಶ್ವರಪುರ,
ತುಮಕೂರು.

ಶ್ರೀಶೈಲವನ್ನು ಪ್ರವೇಶಿಸಲು ನಾಲ್ಕು ದಿಕ್ಕುಗಳಲ್ಲೂ ನಾಲ್ಕು ದ್ವಾರಗಳಿವೆ. ಪೂರ್ವದ್ವಾರದಲ್ಲಿ ತ್ರಿಪುರಾಂತಕೇಶ್ವರ ದೇವಾಲಯವೂ, ಪಶ್ಚಿಮ ದ್ವಾರದಲ್ಲಿ ಜೋಗಲಾಂಬ ದೇವಾಲಯವೂ, ನಮ್ಮ ಯಾತ್ರಾತಂಡ ಪಶ್ಚಿಮದ್ವಾರದ ಮೂಲಕ ಶ್ರೀಶೈಲವನ್ನು ಪ್ರವೇಶಿಸಿ ದಕ್ಷಿಣ ದ್ವಾರದಿಂದ ಬೀಳ್ಕೊಂಡಿತು. ದಕ್ಷಿಣದ್ವಾರದಲ್ಲಿ ಸಿದ್ದೇಶ್ವರ ಸ್ವಾಮಿ ನೆಲೆಸಿದ್ದಾನೆ ಮತ್ತು ಉತ್ತರ ದ್ವಾರದಲ್ಲಿ ಉಮಾಮಹೇಶ್ವರ ದೇವಾಲಯವಿದೆ. ನಾಲ್ಕು ದ್ವಾರಗಳಲ್ಲಿನ ಮುಖ್ಯ ಮಂದಿರಗಳನ್ನು ಮಾತ್ರ ಹೆಸರಿಸಿ ದ್ದೇನೆ. ಆದರೆ ಒಂದೊಂದೂ ದ್ವಾರದ ಸುತ್ತ ಮುತ್ತಲೂ ಅನೇಕ ದೇವ-ದೇವಿಯರ ಮಂದರಿಗಳೂ, ಸಾಧಕರು ಸಿದ್ಧಿ ಪಡೆದ ಸ್ಥಳಗಳೂ, ಅಸಂಖ್ಯಾತ ತೀರ್ಥಗಳೂ ಹರಡಿಕೊಂಡಿವೆ. ಆದ್ದರಿಂದಲೇ ಶ್ರೀಶೈಲ **'ಕೋಟಿಲಿಂಗಗಳ ಪರ್ವತ'** ಎಂಬ ಖ್ಯಾತಿಗೆ ಪಾತ್ರವಾಗಿದೆ. ವ್ಯಾಸರ ಸ್ಕಂದ ಪುರಾಣ ಮೊದಲ್ಗೊಂಡು ಅನೇಕ ಪುರಾಣ ಗಳಲ್ಲಿ ಶ್ರೀಶೈಲಗಿರಿಯ ವರ್ಣನೆ ಇದೆ. ಜೈನ, ಬೌದ್ಧ ಸಾಹಿತ್ಯದಲ್ಲೂ ಈ ಪ್ರದೇಶದ ವಿವರಣೆ ಸಿಕ್ಕುತ್ತದೆ.

ಸೃಷ್ಟಿಯಲ್ಲಿ ಭೂಗ್ರಹವೊಂದು ಚಮತ್ಕಾರ ಗಳ ಆಗರ, ಸಂಪತ್ತಿನ ಭಂಡಾರ, ನಿಗೂಢತೆ ಗಳನ್ನು ತುಂಬಿಕೊಂಡಿರುವ ಪೆಠಾರಿ. ಅಲ್ಲದೆ ಅತಿ ಚೆಲುವನ್ನು ಹೊರಸೂಸುತ್ತಿರುವ ಗಿಡ-ಮರ, ಬಳ್ಳಿ, ಪಶು-ಪಕ್ಷಿ, ಜೀವ- ಜಂತು, ಗಿರಿ, ಶಿಖರ, ನದಿ, ಸರೋವರ ಸಾಗರ ಇತ್ಯಾದಿಗಳ ಜೀವ ದಾಯಿನಿ. ಇಂಥ ಪೃಥ್ವಿಗೆ ಶ್ರೀಶೈಲಕ್ಷೇತ್ರ ಮತ್ತಷ್ಟು ಕಳೆ ತಂದಿದೆ, ಚೆಲುವನ್ನು ಹೆಚ್ಚಿಸಿದೆ ಎಂದರೆ ಉತ್ಪ್ರೇಕ್ಷೆಯ ಮಾತಲ್ಲ.

ಶ್ರೀಶೈಲ ಪರ್ವತದ ಉದ್ಭವದ ಬಗ್ಗೆ ಕೆಲವು ವಿಸ್ಮಯಕಾರಿ ಕತೆಗಳಿವೆ. ಅವುಗಳಲ್ಲಿ ಒಂದು ಹೀಗಿದೆ – ಪೂರ್ವಕಾಲದಲ್ಲಿ ಸಂತಾನಾಪೇಕ್ಷೆಯಿಂದ ಶಿಲಾದನೆಂಬ ಮಹರ್ಷಿ ಶಿವನನ್ನು ಕುರಿತು ತಪಸ್ಸುಮಾಡಿ, ಆ ದೇವನನ್ನು ಮೆಚ್ಚಿಸಿ ಇಬ್ಬರು ಸುಪುತ್ರರನ್ನು ಪಡೆದನಂತೆ, ಮೊದಲನೆಯವನು ನಂದೀಶ್ವರ, ಎರಡನೆಯವನು ಪರ್ವತ. ಇಬ್ಬರೂ ಶಿವಭಕ್ತರು, ಸುಗುಣ ಶೀಲರು ಮತ್ತು ಪರೋಪಕಾರಿಗಳು. ಲೌಕಿಕ ಭೋಗಭಾಗ್ಯಗಳಿಗಿಂತ ಶಿವನ ಸಾಕ್ಷಾತ್ಕಾರ ಪಡೆಯಬೇಕೆಂಬುದೇ ಅವರ ಮಹದಾಸೆಯಾಗಿತ್ತು. ಶ್ರದ್ಧಾ-ಭಕ್ತಿಗಳಿಂದ ಕಠಿಣ ತಪವನ್ನಾಚರಿಸಿ ಶಿವನನ್ನು ಮೆಚ್ಚಿಸಿ ದರ್ಶನಭಾಗ್ಯ ಪಡೆದರು. ಪ್ರತ್ಯಕ್ಷನಾದ ಶಿವನು ವರವನ್ನು ಬೇಡಿರೆಂದಾಗ – ನಂದೀಶ್ವರನು 'ಶಿವನೇ ನೀನು ಯಾವಾಗಲೂ ನನ್ನ ಮೇಲೇ ಆಸೀನನಾಗಿರಬೇಕು ಅದಕ್ಕಾಗಿ ನಿನ್ನ ವಾಹನ ವಾಗಿರುವಂತೆ ನನಗೆ ವರವನ್ನು ಕರುಣಿಸು' ಎಂದು ಬೇಡಿದನು. ಪರ್ವತನು ಶಿವನ ಅಪ್ಪಣೆ ಪಡೆದು ಮೂರು ವರಗಳನ್ನು ಬೇಡಿ ದನು – 'ಶಿವನು ಅವನ ಮೇಲೇ ನೆಲೆಸಿರ ಬೇಕು; ಅದಕ್ಕಾಗಿ ತಾನು ಪರ್ವತವಾಗ ಬೇಕು; ಶಿವನು ಪರ್ವತಲಿಂಗವಾಗ ಬೇಕು, ಭೂಲೋಕದ ಶ್ರೇಷ್ಠತೀರ್ಥಗಳು ಅಲ್ಲಿ ಆವಿರ್ಭವಿಸಬೇಕು. ಈ ಪರ್ವತವನ್ನು ದರ್ಶಿಸಿದವರಿಗೆ ಮುಕ್ತಿ ದೊರೆಯ ಬೇಕು! ಮಾನವರಿಗೆಲ್ಲಾ ಮುಕ್ತಿಯನ್ನು ದೊರಕಿಸಿ ಕೊಡಬೇಕೆಂಬುದೇ ಪರ್ವತನ ಸದಾಶಯ ವಾಗಿತ್ತು. ಕೆರೆ, ನದಿ, ಜಲ ಧಾರೆ ಬತ್ತಿ ಹೋಗಬಹುದು. ಆದರೆ ಗಿರಿ ಶಿಖರಗಳು ಕರಗುವುದಿಲ್ಲ, ಕಣ್ಮರೆಯಾಗುವುದಿಲ್ಲ. ಮನುಷ್ಯನಿಗೆ ಆಧ್ಯಾತ್ಮದ ಔನತ್ಯಕ್ಕೇರಬೇಕೆಂಬ ಪ್ರೇರಣೆ ನೀಡುತ್ತಿರುತ್ತವೆ. "ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ" ಶ್ರೀ ಶೈಲ ಶಿಖರವನ್ನು ದರ್ಶಿಸಿದವರಿಗೆ ಜನನ-ಮರಣ ಗಳಿಲ್ಲ, ಅವರಿಗೆ ಪುನರ್ಜನ್ಮವಿಲ್ಲ. ಮುಕ್ತಿಯನ್ನು ಪಡೆಯುವರು. ಶ್ರೀಶೈಲದ ಮಹತ್ವದ ಬಗ್ಗೆ ಮತ್ತೊಂದು ಆರ್ಯೋಕ್ತಿಯುಂಟು –

*"ಕಾಶ್ಯಾಂತೇ ಮರಣಾನ್ಮುಕ್ತಿಃ ಸ್ಮರಣಾದರುಣಾಚಲೇ*
*ದರ್ಶನಾನೇವ ಶ್ರೀಶೈಲೇ ಪುನರ್ಜನ್ಮ ನ ವಿದ್ಯತೇ"*

ಕಾಶೀಕ್ಷೇತ್ರದಲ್ಲಿ ಮರಣವಾದರೆ ಮುಕ್ತಿ ದೊರೆಯುವುದೆಂಬ ಮಾತು ರೂಢಿಯಲ್ಲಿದೆ. ಹಾಗೆಯೇ ಅರುಣಾಚಲಕ್ಷೇತ್ರದಲ್ಲಿ ಸ್ಮರಣೆಮಾತ್ರ ದಿಂದಲೇ ಮೋಕ್ಷ ಲಭಿಸುವುದು, ಅಂತೆಯೇ ಶ್ರೀಶೈಲಕ್ಷೇತ್ರ ದಲ್ಲಿ ಶಿಖರದರ್ಶನದಿಂದಲೇ ಮೋಕ್ಷ ಲಭಿಸು ವುದು. ಜನನ-ಮರಣ ಚಕ್ರದಿಂದ ಜೀವಿಯ ಬಿಡುಗಡೆ ಯಾಗುವುದು. ಒಟ್ಟಿನಲ್ಲಿ ಶಿವಭಕ್ತರಿಗೆ ಶ್ರೀಶೈಲ ಮುಕ್ತಿ ದೊರೆಯುವ ತಾಣ.



ಅಕ್ಕನ ಅನುಷ್ಠಾನದ ಗುಹೆಯ ಮುಂಭಾಗದ ನೋಟ

ಇದನ್ನು ನಂಬದವರಿಗೂ ಕೂಡ ಶ್ರೀಶೈಲ ಆಸಕ್ತಿಯ ಪ್ರದೇಶ ಹಾಗೂ ವಿಸ್ಮಯಗಳ ತಾಣ. ಅಲ್ಲಿನ ಕೆಂಬಣ್ಣದ ಪರ್ವತ ಪಂಕ್ತಿಗಳು, ಶಿಖರ ಗಳು, ತಲುಪಲಸಾಧ್ಯ ವಾದ ಕಣಿವೆಗಳು, ಕಮರಿಗಳು, ಗುಹೆಗಳು, ದಟ್ಟವಾದ ಕಾಡು, ನದಿ, ಜಲಧಾರೆಗಳು, ಮಣ್ಣು-ಕಲ್ಲು, ಪಶು-ಪಕ್ಷಿ ಇವೆಲ್ಲವುಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಪ್ರಕೃತಿ ಸೌಂದರ್ಯದ ಸೊಬಗಿನಲ್ಲಿ ತನು-ಮನಗಳನ್ನು ಮುದಗೊಳಿಸಿಕೊಳ್ಳಬಹುದು; ಆನಂದಿಸಬಹುದು.

ಶ್ರೀಶೈಲಗಿರಿಯ ವರ್ಣನೆಯನ್ನು ಅಕ್ಕನ ಅನೇಕ ವಚನಗಳಲ್ಲಿ ಕಾಣಬಹುದು. ಶ್ರೀಶೈಲದ ಅಣು ಅಣುವಿನಲ್ಲಿ ಚೆನ್ನಮಲ್ಲಿಕಾರ್ಜುನನ ವಿರಾಟ್ ಸ್ವರೂಪವನ್ನೇ ಕಂಡ ಅಕ್ಕನ ಈ ವಚನ ನಮ್ಮ ಕಣ್ಣುಗಳಲ್ಲೂ ಆ ದೃಶ್ಯಗಳನ್ನು ಬಿಂಬಿಸುತ್ತದೆ –

*''ವನವೆಲ್ಲಾ ಕಲ್ಪತರು, ಗಿಡವೆಲ್ಲಾ ಮರುಜವಣಿ,*
*ಜಲವೆಲ್ಲಾ ನಿರ್ಜರಾಮೃತ, ಮೃಗವೆಲ್ಲಾ ಪುರುಷಾಮೃಗ,*
*ಎಡಹುವ ಹರಳೆಲ್ಲಾ ಚಿಂತಾಮಣಿ''*

ಹೀಗೆ ಶ್ರೀಶೈಲದಲ್ಲಿಹ ಖಗ-ಮೃಗ, ಕಲ್ಲು- ಮಣ್ಣು, ನೀರು, ಬೆಟ್ಟ, ಎಲ್ಲ ಕಡೆ ತನ್ನ ಆರಾಧ್ಯ ದೈವದ ಚೈತನ್ಯವನ್ನೇ ಕಾಣುತ್ತಾಳೆ. ೧೩ನೇ ಶತಮಾನದ ಅಂತ್ಯದಲ್ಲಿದ್ದ ಪಾಲ್ಕುರಿಕೆ ಸೋಮನಾಥನ *'ಪಂಡಿತಾರಾಧ್ಯ ಚರಿತಮು'* ಕಾವ್ಯದಲ್ಲಿ ವರ್ಣಿಸಿರುವಂತೆ – ಮಲ್ಲಿಕಾರ್ಜುನ ಪಂಡಿತರು ಶ್ರೀಶೈಲಗಿರಿಯನ್ನೇರಲು ಒಪ್ಪುವು ದಿಲ್ಲ. ಅವರಿಗೆ ಶ್ರೀಗಿರಿಯು ಶಿವಲಿಂಗವಾಗಿ ಗೋಚರಿಸುತ್ತದೆ. ಶಿವಲಿಂಗವನ್ನು ಮೆಟ್ಟಲು ಹಿಂಜರಿಯುತ್ತಾರೆ. ತನ್ನ ಶಿಷ್ಯ ದೋನಯ್ಯ ನನ್ನು ಬೆಟ್ಟಹತ್ತಿ ಹೋಗಿ ಮಲ್ಲಿಕಾರ್ಜುನ ದೇವರನ್ನು ದರ್ಶಿಸಿ ಬರಲು ತಿಳಿಸುತ್ತಾರೆ. ಹೀಗೆ ಶ್ರೀಶೈಲ ತನ್ನ ಹೊರ-ಒಳಗುಗಳಲ್ಲಿ ವೈವಿಧ್ಯತೆಯನ್ನು ತುಂಬಿಕೊಂಡು ದರ್ಶಕರನ್ನು ಆಕರ್ಷಿಸುತ್ತಿದೆ.

ಶ್ರೀಶೈಲಕ್ಕೆ ಹೋದಕೂಡಲೇ ನಾವು ಮೊದಲು ನೋಡ ಬಯಸುವುದು ಮಲ್ಲಿಕಾರ್ಜುನಸ್ವಾಮಿ ಮತ್ತು ಭ್ರಮರಾಂಬ ದೇವಿಯರ ಮಂದಿರಗಳನ್ನು ಕಾಣುತ್ತೇವೆ. ಪರಶಿವನು ಮಲ್ಲಿಕಾರ್ಜುನ ಲಿಂಗವಾಗಿಯೂ, ಪರಶಿವೆಯು ಭ್ರಮರಾಂಬೆಯಾಗಿಯೂ ಆವಿರ್ಭವಿಸಿದ್ದು ಈ ಕ್ಷೇತ್ರ. ಶಿವಪೀಠ-ಶಕ್ತಿ ಪೀಠವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ದೇವಾಲಯಗಳು ವಿಶಾಲ ವಾದ ಜಾಗದಲ್ಲಿದ್ದು, ಸುತ್ತಲೂ ೩೦ ಅಡಿ ಎತ್ತರದ ಗೋಡೆಯಿದೆ (ಕಾಂಪೌಂಡ್) ಈ ಗೋಡೆಗೆ ನೂರಾರು ಚಿತ್ರಗಳನ್ನು ಕೆತ್ತಿದ ಕಲ್ಲುಗಳನ್ನು ಹೊಂದಿಸಿದ್ದಾರೆ. ಪೌಳಿಗೋಡೆಯ ಕಲ್ಲುಗಳ ಮೇಲಿನ ಚಿತ್ರಗಳು ನಮ್ಮ ಕಣ್ಸೆಳೆಯುತ್ತವೆ. ಗೋಡೆಯ ಕೆಳಭಾಗದಲ್ಲಿ ಆನೆ-ಕುದುರೆಗಳ ಚಿತ್ರಗಳಿವೆ. ಅವುಗಳ ಮೇಲೆ ಪೂರ್ವದ ಗೋಡೆಯ ಮೇಲೆ ಪಾರ್ವತಿಕಲ್ಯಾಣ, ಗಜಾಸುರ ಸಂಹಾರ, ಶಿಬಿಚಕ್ರವರ್ತಿಯ ಕತೆ, ತಾರಕಾಸಂಹಾರ, ಶಿವನ ತಪೋಭಂಗ ಮಂತಾದ ದೃಶ್ಯಗಳಿವೆ. ದಕ್ಷಿಣದ ಗೋಡೆಯ ಮೇಲೆ ಮಹೇಶ್ವರನ ಭಿಕ್ಷಾಟನೆ, ಶಿವತಾಂಡವ, ನಾಗಬಂಧ, ಮಹಿಷಾಸುರಮರ್ಧಿನಿ ಇತ್ಯಾದಿ ಚಿತ್ರಗಳಿವೆ. ಉತ್ತರದ ಗೋಡೆಯ ಮೇಲೆ ಶಿವತಾಂಡವ, ಭೃಂಗಿನಾಟ್ಯ, ಶಿವನ ವಿಶ್ವರೂಪ, ಮಹಿಷಾಸುರಮರ್ಧಿನಿ ಮೊದಲಾದ ಚಿತ್ರಗಳಿವೆ. ಪಶ್ಚಿಮ ದ್ವಾರದ ಮೇಲೆ ಲಕ್ಷ್ಮಿ, ಗಣಪತಿಯ ವಿಗ್ರಹಗಳಿವೆ.

ಇಂತಹ ಚಿತ್ರಗಳ ಮಧ್ಯೆ ಅಪೂರ್ವವಾದ, ಅಲೌಕಿಕ ವಾದ, ಅಪೂರ್ವ ಚಿತ್ರವೊಂದಿದೆ. ಇದನ್ನು ತೋರಿಸಿಕೊಟ್ಟವರು ಶ್ರೀ ಟಿ.ಎಚ್. ಸದಾಶಿವಯ್ಯನವರು. ಚಿತ್ರದ ಈ ಬಗ್ಗೆ ಅವರಿಗೆ ಗೊತ್ತಾಗಿದ್ದು ಕ್ಯಾಪ್ಟನ್ ಮೆಕಂಜಿಯವರ ಬರವಣಿಗೆಯಿಂದ. ಹೈದರಾಬಾದಿನಲ್ಲಿ ಕ್ಯಾಪ್ಟನ್‌ರಾಗಿದ್ದ ಮೆಕಂಜಿಯವರು ಶ್ರೀಶೈಲಕ್ಕೆ ಬಂದು ಕೆಲಕಾಲ ತಂಗಿದ್ದು, ಅಲ್ಲಿನ ಇತಿಹಾಸವನ್ನು ಅಭ್ಯಾಸ ಮಾಡಿ ೧೭೯೮ರಲ್ಲಿ ಒಂದು ವಿಸ್ತಾರವಾದ ಲೇಖನವನ್ನು ಪ್ರಕಟಿ ಸಿದ್ದರು. ಸುಮಾರು ೧೯೫೦-೬೦ರ ಅವಧಿಯಲ್ಲಿ ಆಂಧ್ರದ ಕರ್ನೂಲಿನಲ್ಲಿ ನ್ಯಾಯಾಧೀಶರಾಗಿದ್ದ ಶ್ರೀ ಟಿ.ಎಚ್. ಸದಾಶಿವಯ್ಯ ನವರು ಶ್ರೀಶೈಲಮಠದ ಮೇಲಿದ್ದ ದಾವೆಯೊಂದನ್ನು ಪರಿಶೀಲಿಸಲು ಶ್ರೀಕ್ಷೇತ್ರಕ್ಕೆ ಹೋಗಿದ್ದಾಗ ಮೆಕಂಜಿಯವರು ದಾಖಲಿಸಿದ್ದ ದೇವಸ್ಥಾನದ ಗೋಡೆಯ ಮೇಲಿನ ಚಿತ್ರಗಳ ಬಗ್ಗೆ ಓದಿದರು. ಅವರು ಒಂದು ಅಪೂರ್ವ ಚಿತ್ರದ ಬಗ್ಗೆ ನೀಡಿದ್ದ ವಿವರವನ್ನು ಓದಿ ಸದಾಶಿವಯ್ಯನವರ ಮೈರೋಮಾಂಚನ ಗೊಂಡಿತು – ''ಒಂದು ಬಾಳೆಯಗಿಡ. ಅದರಡಿಯಲ್ಲಿ ಒಂದು ಶಿವಲಿಂಗ, ಆ ಲಿಂಗದಿಂದ ಎರಡು ಕೈಗಳು ಹೊರ ಚಾಚಲ್ಪಟ್ಟಿವೆ. ಅವು



ಕ್ಷೇತ್ರದರ್ಶನ

ಯಾರನ್ನೋ ಆಹ್ವಾನಿಸುವಂತಿವೆ. ಆ ಶಿವಲಿಂಗದ ಮುಂದೆ ಓರ್ವ ನಗ್ನ ಬಾಲಿಕೆ, ಕೈಯ್ಯಲ್ಲಿ ರುದ್ರಾಕ್ಷಿಮಾಲೆ, ಲಿಂಗದ ಕಡೆಗೆ ಧಾವಿಸುತ್ತಿದ್ದಾಳೆ''. ಈ ವಿಚಾರವನ್ನು ಶ್ರೀ ಸದಾಶಿವಯ್ಯನವರ 'ಏಕಾಂತವಾಸದ ಮುದಿಮಲ್ಲಯ್ಯ' ಎಂಬ ಲೇಖನದಲ್ಲಿ ದಾಖಲಿಸಿರುವುದನ್ನು ಓದಿದ್ದೆ. ಶ್ರೀಯುತರು ದೇವಸ್ಥಾನದ ಪೌಳಿಗೆಯ ಗೋಡೆಯ ಮೇಲಿದ್ದ ಅಸಂಖ್ಯ ಚಿತ್ರಗಳಲ್ಲಿ ಅಕ್ಕನಿದ್ದ ಚಿತ್ರವನ್ನು ಹುಡುಕಿದ್ದರು, ಅದು ಪ್ರಾಕಾರದ ಎಡಭಾಗದ ಗೋಡೆಯ ಮೇಲೆ ರೂಪುಗೊಂಡಿತ್ತು. ಶ್ರೀಶೈಲಗಿರಿಯಲ್ಲಿ ಕದಳಿ ಬನದ ಪ್ರಶಾಂತ ತಾಣದಲ್ಲಿ ಅಕ್ಕ ಲಿಂಗೈಕ್ಯಳಾಗುವ ದೃಶ್ಯವನ್ನು ನೋಡುವಾಗ ಮೂಕವಿಸ್ಮಿತರಾಗುತ್ತೇವೆ. ಎಂತಹ ಅದ್ಭುತ ದೃಶ್ಯ ! ಇದನ್ನು ಪತ್ತೆಮಾಡಿ ಪರಿಚಯಿಸಿದ ಶ್ರೀ ಸದಾಶಿವಯ್ಯನವರು ಅಭಿನಂದನಾರ್ಹರು.

ದೇವಾಲಯದ ಪ್ರವೇಶದ್ವಾರ ಬೃಹದಾಕಾರವಾಗಿದ್ದು ಉನ್ನತ ಗೋಪುರವನ್ನು ಒಳಗೊಂಡಿದೆ. ಆಲಯದ ಪ್ರಾಕಾರದ ನಾಲ್ಕು ಕಡೆಗಳಲ್ಲಿ ನಾಲ್ಕು ಗೋಪುರಗಳಿವೆ. ಇವುಗಳ ನಡುವೆ ಬಂಗಾರದ ಶಿಖರಗಳಿಂದ ದೇವಾಲಯವು ಕಂಗೊಳಿಸುತ್ತದೆ.

ಮಲ್ಲಿಕಾರ್ಜುನಸ್ವಾಮಿ ಲಿಂಗವು ಸ್ವಲ್ಪ ಚಿಕ್ಕದೇ ಆದರೂ ಮುಂದಿನ ಮಂಟಪದಲ್ಲಿನ ಬಸವಣ್ಣನ ವಿಗ್ರಹ ದೊಡ್ಡದಾಗಿದೆ. ಜ್ಯೋತಿರ್ಲಿಂಗಕ್ಕೆ ನಮಿಸಿ ಮುಖ್ಯದೇವಾಲಯದ ಹಿಂಭಾಗಕ್ಕೆ ಹೋದರೆ ಭ್ರಮರಾಂಬದೇವಾಲಯವಿದೆ. ಈ ಎರಡೂ ಮಂದಿರಗಳ ಮಧ್ಯೆ ಸ್ವಲ್ಪ ಎಡಭಾಗದಲ್ಲಿ ಶ್ರೀಶೈಲಪೀಠದ ಜಗದ್ಗುರುಗಳ ಮಠವಿದೆ. ದೇವಾಲಯದ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಸಪ್ತಮಾತೃಕೆಯರ ಮಂಟಪಗಳಿವೆ. ಇದರ ಬಲ ಭಾಗದಲ್ಲಿ ಒಂದು ಹೊಂಡವಿದೆ. ಇದರ ನೀರು ಬಹಳ ಸಿಹಿಯಾಗಿರುವುದರಿಂದ ಇದನ್ನು ಮನೋಹರ ಹೊಂಡವೆನ್ನುತ್ತಾರೆ. ಇಂತಹ ಅನೇಕ ಹೊಂಡಗಳು ದೇವಾಲಯದ ಆವರಣ ದಲ್ಲೇ ಇವೆಯಂತೆ, ಆದರೆ ಅವುಗಳನ್ನೆಲ್ಲಾ ಸಿಮೆಂಟ್ ತಟ್ಟೆಯಿಂದ ಮುಚ್ಚಿದ್ದಾರೆ. ಕಿಂಡಿಯ ಮೂಲಕ ನೀರನ್ನು ಕಾಣಬಹುದು.

ಪ್ರಧಾನ ದೇವಾಲಯದ ಆವರಣದಲ್ಲೇ ಶಿವನ ಅಷ್ಟಮೂರ್ತಿಗಳಾದ ಭವ, ಶರ್ಮ, ಈಶಾನ, ಪಶುಪತಿ, ರುದ್ರ, ಉಗ್ರ, ಭೀಮ, ಮಹಾದೇವಮೂರ್ತಿಗಳ ಆಲಯಗಳಿವೆ. ಒಂದು ಮಂಟಪದಲ್ಲಿ ಅಕ್ಕಮಹಾದೇವಿ ಮತ್ತು ಹೇಮರೆಡ್ಡಿ ಮಲ್ಲಮ್ಮನ ವಿಗ್ರಹಗಳಿವೆ. ದೇವಾಲಯದ ಉತ್ತರದಲ್ಲಿ ಸಾಲಾಗಿ ಐದು ಗುಡಿಗಳಿವೆ. ಇವುಗಳಲ್ಲಿರುವ ಲಿಂಗಗಳನ್ನು ಪಾಂಡವರು ಪ್ರತಿಷ್ಠಾಪಿಸಿದರು ಎಂಬ ಪ್ರತೀತಿ ಇದೆ. ಈ ಗುಡಿಗಳಿಗೆ ಹೊಂದಿಕೊಂಡು ಆಯುಧ ಪಾಣಿಯಾದ ವೀರಭದ್ರನ ವಿಗ್ರಹವಿದೆ. ಇಷ್ಟೇ ಅಲ್ಲದೆ ಇನ್ನೂ ಅನೇಕ ಪೂಜನೀಯ ಸ್ಥಳಗಳನ್ನು, ದೇವಿ-ದೇವತೆಗಳ ಮೂರ್ತಿಗಳನ್ನು ಕಾಣಬಹುದು. ಇಲ್ಲಿರುವ ವೃದ್ಧ ಮಲ್ಲಿಕಾರ್ಜುನ ಲಿಂಗವನ್ನು ಕಂಡಾಗ ನಮ್ಮ ಆಕಾರಕ್ಕೆ (ಶರೀರಕ್ಕೆ) ಮುಪ್ಪಿನ ಕವಚ ಆವರಿಸಿಕೊಳ್ಳುತ್ತಿರುವಂತೆ ಭಾಸ ವಾಗುತ್ತದೆ. ವೃದ್ಧ ಮಲ್ಲಿಕಾರ್ಜುನಲಿಂಗ ಬಹಳ ಪುರಾತನ ವಾದುದೆಂದೂ ಆಕಾರದಲ್ಲಿ ದೊಡ್ಡದಾದ ಈ ಲಿಂಗವು ಉಬ್ಬು ತಗ್ಗುಗಳಿಂದ ತನ್ನ ವೃದ್ಧಾಪ್ಯವನ್ನು ಪ್ರಕಟಿಸುತ್ತಿದೆ ಎಂದು ಹೇಳಲಾಗುತ್ತಿದೆ. ಇನ್ನೊಂದು ಲಿಂಗ ನಮ್ಮ ಗಮನ ಸೆಳೆಯುತ್ತದೆ – ಶ್ರೀರಾಮಚಂದ್ರನು ಸಹಸ್ರಲಿಂಗಗಳನ್ನುಳ್ಳ ಒಂದು ಕಪ್ಪು ಶಿಲೆಯ ಲಿಂಗವನ್ನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ. ಇದು ವೃದ್ಧ ಮಲ್ಲಿಕಾರ್ಜುನ ಲಿಂಗದ ಹಿಂಭಾಗದಲ್ಲಿದೆ.

ಮಲ್ಲಿಕಾರ್ಜುನ ಸ್ವಾಮಿಮಂದಿರದಲ್ಲಿರುವ ಅನೇಕ ಸ್ಥಳಗಳನ್ನು ದರ್ಶಿಸಿ ಹೊರಬಂದರೆ ಪ್ರಸಿದ್ಧಮಠಗಳು ಎದಿರಾಗುತ್ತವೆ. ಶೃಂಗೇರಿ ಶಾರದಾಮಠ, ವಿಭೂತಿಮಠ, ಘಂಟಾಮಠ ಮುಂತಾದವುಗಳು. ಪಾಲ್‌ಧಾರ, ಪಂಚಧಾರಾ, ಬಿಂದು ತೀರ್ಥ, ಮಲ್ಲಮ್ಮನ ಕಣ್ಣೀರು ಮುಂತಾದ ತೀರ್ಥಗಳೂ, ಮಂದಿರಗಳು, ಶಿಖರಗಳು ಕಂಡುಬರುತ್ತದೆ. ಇವೆಲ್ಲವನ್ನೂ ನೋಡಿ ತಣಿದು ತ್ರಿಕೂಟ ಪರ್ವತಗಳತ್ತ ಸಾಗಿದರೆ ದೊರಕುವ ಸಂತೋಷ ಅವರ್ಣನೀಯ.

ಎರಡೂಕಡೆ ಉನ್ನತ ಪರ್ವತ ಶ್ರೇಣಿಗಳು, ತಳದ ಆಳದಲ್ಲಿ ಕೃಷ್ಣಾನದಿ ವಿಶಾಲ ಹರವನ್ನು ಹೊಂದಿ ಹರಿಯುತ್ತಿದೆ. ದಟ್ಟವಾದ ಕಾಡು, ಬಾಲಕ ಸಿದ್ಧರಾಮ ಶ್ರೀಶೈಲದಲ್ಲಿ ಮಲ್ಲಯ್ಯನನ್ನು ಹುಡುಕಿ ನಿರಾಶನಾಗಿ ಪ್ರಾಣ ತೊರೆಯಲು ಬೆಟ್ಟದ ಮೇಲಿಂದ ಜಿಗಿದ 'ಸಿದ್ಧರಾಮಕೊಳ್ಳ' ಇಲ್ಲಿದೆ. ಅಕ್ಕನ ಗುಡ್ಡದ ಅಕ್ಕನ ಗುಹೆಗೆ ಹೋಗಲು ಕೃಷ್ಣೆಯ ಮೇಲೆ ದೋಣಿಯಲ್ಲಿ ಹೋಗಬೇಕು. ನೂರಾರು ಮೆಟ್ಟಿಲುಗಳನ್ನಿಳಿದು ಕೃಷ್ಣೆಯನ್ನು ತಲುಪಿ ಯಾಂತ್ರಿಕೃತ ದೋಣಿಯಲ್ಲಿ ಹೋದರೆ ಸುಮಾರು ಒಂದು ಗಂಟೆ ಪ್ರಯಾಣದ ನಂತರ ಅಕ್ಕನಗುಹೆ ಇರುವ ಗುಡ್ಡವನ್ನು ತಲುಪುತ್ತೇವೆ. ಶತ ಶತಮಾನಗಳಿಂದ ನದಿಯ ನೀರಿನ ಹೊಡೆತಕ್ಕೆ ಸಿಕ್ಕಿ ಬೆಟ್ಟದ ಬಂಡೆಗಳು ವಿವಿಧ ಆಕಾರಗಳನ್ನು ಪಡೆದುಕೊಂಡಿರುವ ದೃಶ್ಯ ನೋಡಲು ಮನಮೋಹಕ. ಅಕ್ಕನ ಗುಹೆಗೆ ಸಾಗಲು ಬೆಟ್ಟವನ್ನು ಏರಲು ಪ್ರಯಾಸಪಡಬೇಕು. ಬೆಟ್ಟನೇರ, ಬೃಹತ್‌ಗಾತ್ರದ ಬಂಡೆಗಳಿಂದ ಕೂಡಿದ್ದು ಸಮತಟ್ಟಿನ ಜಾಗವೇ ಇಲ್ಲ. ಅಕ್ಕನಗುಹೆಯ ಮುಂಭಾಗವನ್ನು ಕಂಡಕೂಡಲೇ ಆನಂದ, ಆಶ್ಚರ್ಯದ ಉದ್ಗಾರ ನಮ್ಮ ಬಾಯಿಂದ ಹೊರಬೀಳುತ್ತದೆ. ಮುಂದೆ ಸಾಗಿದರೆ ದೊಡ್ಡಗುಹೆ, ಮೊದಲು ಆ ಗುಹೆಗೆ ಹೋಗದೆ ಬಲಭಾಗದ ಗುಹೆಗೆ ಹೋದರೆ ಸ್ವಲ್ಪದೂರ ಹೋಗುವಲ್ಲಿ ಒಂದು ಚಿಕ್ಕ ಲಿಂಗ, ಬಸವಣ್ಣನ ವಿಗ್ರಹ ಕಂಡು ಬರುತ್ತವೆ. ಹಿಂತಿರುಗಿ ಒಂದು ಮುಖ್ಯಗುಹೆಯನ್ನು ಹೊಕ್ಕರೆ ಅಲ್ಲಿ ಕಗ್ಗತ್ತಲು. ಕೃತಕ ಬೆಳಕು ಮಿಂಚುಹುಳಗಳಷ್ಟೇ ಪ್ರಕಾಶ ಚೆಲ್ಲಬಹುದು. ಎಡಕ್ಕೆ ತಿರುಗಿ ಮುಂದೆ ಹೋದರೆ ಬಲಕ್ಕೊಂದು ತಿರುವು, ಗುಹೆಯಲ್ಲಿ ತುಂಬಾ ದೂರ ಮುಂದುವರೆಯುವುದು ಸಾಧ್ಯವಾಗುವುದಿಲ್ಲ.

ಈ ಗುಹೆಯ ಮಹತ್ವದ ಬಗ್ಗೆ ಜನರ ಒಂದು ನಂಬಿಕೆಯನ್ನು ದಾಖಲಿಸಬಹುದೇನೋ ! ಅಕ್ಕ ಇಲ್ಲಿ ಸಾಧನೆ ಮಾಡುತ್ತಿದ್ದಾಗ

ಕೌಶಿಕರಾಜ ವೈರಾಗ್ಯ ತಾಳಿ ತನ್ನೆಲ್ಲ ರಾಜ-ಭೋಗ ಗಳನ್ನು ತೊರೆದು ಅಕ್ಕನನ್ನು ಹುಡುಕುತ್ತಾ ಇಲ್ಲಿಗೆ ಬಂದನಂತೆ. ಅಕ್ಕ ಅವನಿಗೆ ದೀಕ್ಷೆಕೊಟ್ಟು ಕಳುಹಿಸಿದಳಂತೆ. ನಂತರ ತಾನು ಆ ಗುಹೆಯನ್ನು ತೊರೆದು ಎದುರು ಸಾಲಿನ ಪರ್ವತವನ್ನೇರಿ (ತ್ರಿಕೂಟ) ಮುಂದೆ ಸಾಗಿ ಕದಳಿವನದ ಕಂದರದತ್ತ ಸಾಗಿದಳಂತೆ.

ಕದಳಿಯವರೆವಿಗೂ ಹೋಗಿ ಬಂದವರಿದ್ದಾರೆಂದು ತಿಳಿಯಿತು. ಬೆಟ್ಟದ ಶೃಂಗಾಗ್ರದಲ್ಲಿ ಅಕ್ಕನಕೊಳ್ಳವೆಂಬ ರಮ್ಯವಾದ ಪ್ರದೇಶವಿದ್ದು ಅಲ್ಲೊಂದು ವಿಶಾಲವಾದ ಗುಹೆ ಕಂಡುಬರುವುದು. ಅಲ್ಲಿ ಅಕ್ಕನ ವೇದಿಕೆ, ಅಕ್ಕನ ಕೊಳಗಳೇ ಅಲ್ಲದೆ ಅಕ್ಕನ ವಿಗ್ರಹ ಮತ್ತು ಕಲ್ಲುಕುರಕೆ ಮಲ್ಲರಸ ಮುಂತಾದ ಶರಣರ ವಿಗ್ರಹಗಳಿವೆಯಂತೆ. ಆ ಗುಹೆಯಲ್ಲೊಂದು ಗುಪ್ತಗವಿಯಿದ್ದು, ಧೈರ್ಯದಿಂದ ಮುಂದೆ ಸಾಗಿದರೆ ಜ್ಯೋತಿರ್ಲಿಂಗ ವಿದೆಯೆಂದೂ ಅದೇ ಮೂಲ ಮಲ್ಲಿಕಾರ್ಜುನಸ್ವಾಮಿಯೆಂದೂ ಶ್ರೀ ಸದಾಶಿವಯ್ಯನವರು ಬರೆದಿದ್ದಾರೆ. ಅವರ ಪ್ರಕಾರ ಕದಳಿವನವು ಎರಡು ದೊಡ್ಡಬೆಟ್ಟಗಳ ಮಧ್ಯೆ ಒಂದು ಆಳವಾದ ಸುಮಾರು ಒಂಭತ್ತು ಮೈಲಿ ಉದ್ದದ ಒಂದು ಮೈಲಿ ಅಗಲದ ಒಂದು ದುರ್ಗಮವಾದ ಕೊಳ್ಳ, ಗಿಡ-ಗಂಟೆ, ಮುಳ್ಳು- ಬಳ್ಳಿಗಳಿಂದ ತುಂಬಿದ ನಿರ್ಜನ ಪ್ರದೇಶ. ಶ್ರೀ ಸದಾಶಿವಯ್ಯ ನವರು ಹರಸಾಹಸದಿಂದ ಅಲ್ಲಿಯವರೆಗೆ ಸಾಗಿ ಒಂದು ಕದಳಿಯ ಸಸಿಯನ್ನು ಬಹಳ ಜತನದಿಂದ ತಂದು ಧಾರವಾಡದಲ್ಲಿರುವ ಮುರುಘಾಮಠದ ಸ್ವಾಮಿಗಳಿಗೆ ಒಪ್ಪಿಸಿದರಂತೆ (೧೯೬೦ ರಲ್ಲಿ) ಅದು ಕುಡಿಯೊಡೆಯಿತೇ? ಈಗಲೂ ಆ ತಳಿ ಇದೆಯೇ? ಎಂಬುದನ್ನು ಆಸಕ್ತರು ಶೋಧಿಸಿ ತಿಳಿಯಬಹುದು.

ಕದಳಿ ಎಂದು ಕರೆಯಲ್ಪಡುವ ಆ ನಿರ್ಜನ, ನಿಶ್ಶೂನ್ಯ ತಾಣಕ್ಕೆ ನಾವು ಹೋಗಿ ಬರಲು ಸಾಧ್ಯವಾಗದಿದ್ದರೂ ಒಂದು ಸತ್ಯವನ್ನು ಕಂಡುಕೊಂಡೆ. ಅದು ಸರ್ಪಭೂಷಣ ಶಿವಯೋಗಿ ಗಳು ಹೇಳುವಂತೆ –

*''ಶ್ರೀಗಿರಿಯ ಸುಕ್ಷೇತ್ರಕಿಂದು*
*ಹೋಗಿ ಯಾತ್ರೆಯ ಮಾಡಿಬಂದೆ*
*ಶ್ರೀಗಿರಿಯು ಶರೀರದೊಳಗುಂಟು ....''*

ಅಕ್ಕ ಹೇಳುವಂತೆ – ''ಕದಳಿ ಎಂಬುದುತನುವು, ಕದಳಿ ಎಂಬುದು ಮನ, ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಘೋರಾರಣ್ಯ, ಕದಳಿ ಎಂಬುದ ಗೆದ್ದು ಬದುಕಿ ಬಂದು ಕದಳಿ ಬನದಲ್ಲಿ ಭವಹರನ ಕಂಡೆನು, ಭವಗೆಟ್ಟು ಬಂದೆಯಾ ಮಗಳೆ ಎಂದು ಕರಣದಿಂದ ತೆಗೆದು ಬಿಗಿದಪ್ಪಿದಡೆ ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿಡಗಿದೆ''.

ಶ್ರೀ ಶೈಲದ ಸೊಬಗನ್ನು ವೈರಾಗ್ಯನಿಧಿ ಅಕ್ಕಮಹಾದೇವಿಯ ಐಕ್ಯಸ್ಥಳವನ್ನು ದರ್ಶಿಸುವ ಸುಯೋಗ ದೊರೆತಿದುದು ನಮ್ಮ ಪುಣ್ಯ ಎಂದು ಭಾವಿಸಿದ್ದೇನೆ. ❑

## ಆಧುನಿಕ ವಚನಗಳು

### ಸ್ವಾತಂತ್ರ್ಯ

ಸ್ವಾತಂತ್ರ್ಯ ಲಗಾಮಿಲ್ಲದ ಕುದುರೆಯಂತಾಗಬಾರದಯ್ಯಾ
ಅಂಕುಶವಿಲ್ಲದ ಮಾವಟಿಗ ಆನೆಯೇರಿದಂತಾಗಬಾರದಯ್ಯಾ
ಸ್ವಾತಂತ್ರ್ಯ ಕುರಿತ ಮಕ್ಕಳ ಮುಗ್ಧ ಪ್ರಶ್ನೆಗೆ
ಇಂದು ಏನ ಕಂಡು ಹೇಳಲಿ ಪ್ರಭುವೆ.
ಉತ್ತರ ಮಂಜು ಮುಸುಕಿದ ಮನೆ, ಮನಸು ಲೋಲಕ.
ಮನಸು ರೆಕ್ಕೆ ಕತ್ತರಿಸಿದ ಹಕ್ಕಿಯಾಗಿದೆಯಲ್ಲ,
ಗೊಂದಲ, ಮಾನಸಿಕ ಗೋಡೆಗೆ ಡಿಕ್ಕಿ ಬಿರುಕು ಕಾಂಬದಲ್ಲ
ಬೆಣ್ಣೆಯಲ್ಲಿ ಕೂದಲು ತೆಗೆಯುವ ನಯವಂಚಕರು
ಸತ್ಯವನ್ನು ತಿರುಚಿ ಬರೆದು ಗೋಸುಂಬೆಗಳಿಗೆ ಪ್ರಚಾರ ನೀಡುವವರು
ಜನರ ಕಣ್ಣಿಗೆ ಮಣ್ಣೆರೆಚುವ ಹಗಲು ವೇಷಧಾರಿಗಳು
ದೇಶ ರಕ್ಷಣೆಗಾಗಿ ಎಲ್ಲವನು ಕಳೆದುಕೊಂಡವರ ಮುಂದೆ
ಕಾರು ಬಂಗಲೆ ಪಡೆದು ಡೌಲು ಮಾಡಿ ನಗುವವರು
ಕಾನೂನುಗಳ ತಿರುಚುತ್ತಾ ಕಪಿಮುಷ್ಠಿಯಲ್ಲಿ ಹಿಸುಕುವರು
ಇದರ ಬಗೆಯ ಕಂಡ ಮನಸಿನ ಪರದೆಯ ಮೇಲೆ
ಮೂಡುತಿದೆ ಒಂದರ ಮೇಲೊಂದರಂತೆ
ಉತ್ತರವ ಏನೆಂದು ಹೇಳಲಿ ಹರಳೂರು ವೀರಭದ್ರ ಪ್ರಭುವೆ.

### ಬಸವಣ್ಣನ ಆದರ್ಶ

ಅಣ್ಣ ಬಸವಣ್ಣ ಉದಿಸಿದ ಈ ನಾಡಿನಲ್ಲಿ ಏನೆಲ್ಲ ನಡೆದಿದೆ
ನೀ ಬೋಧಿಸಿದ ದಯೆ, ಧರ್ಮ ಮಾನವೀಯತೆಯ ಮಹಾವೃಕ್ಷ
ಕಾರುಣ್ಯದ ಜಲವಿಲ್ಲದೆ ಒಣಗುತ್ತಿದೆ.
ಅಣ್ಣ ನಿನ್ನ ನಡೆನುಡಿಗಳಲ್ಲೊಂದಾದ
ಆದರ್ಶಗಳು ವೇದಿಕೆಯ ವಸ್ತುವಾಗಿದೆ
ಸರ್ವಧರ್ಮದ ಈ ಬೀಡಿನಲ್ಲಿ ಧರ್ಮ-ಧರ್ಮಗಳ ನಡುವೆ ಕಚ್ಚಾಟ
ಮತಾಂಧರ, ಸ್ವಾರ್ಥಸಾಧಕರ ಕ್ರೌರ್ಯದ ದಳ್ಳುರಿಯಲಿ
ಅಮಾಯಕರ ಆಕ್ರಂದನ
ಮೂಢನಂಬಿಕೆ ಕಂದಾಚಾರಗಳ ಬೇರುಗಳು ಇನ್ನೂ ಒಣಗಿಲ್ಲ.
ಅಣ್ಣ ಬಸವಣ್ಣ ನೀನು ಬೋಧಿಸಿದ ಕಾಯಕತತ್ವ
ಶ್ರಮಿಕ ವರ್ಗಕ್ಕಷ್ಟೇ ಮೀಸಲಾಗಿದೆ.
ಅಹಿಂಸೆ, ಶಾಂತಿ, ಸಾರಿದ ಈ ನಾಡಿನಲಿ
ಭಯೋತ್ಪಾದನೆಯ ಅಟ್ಟಹಾಸ, ಕ್ಷಣ ಕ್ಷಣಕೂ ಆತಂಕದ ವಾತಾವರಣ
ಹಿಂಸೆ, ಕ್ರೌರ್ಯ, ಅಶಾಂತಿಯ ಅಟ್ಟಹಾಸ ಕಂಡು
ಮನವು ಮುದುಡಿ ಹೋಗಿದೆ ಹರಳೂರು ವೀರಭದ್ರ, ಪ್ರಭುವೇ.

– ಎಚ್.ಎಸ್. ಸಿದ್ದಗಂಗಪ್ಪ





## ಶ್ರೀ ಮಠದಲ್ಲಿ ೫೭ನೇ ಸ್ವಾತಂತ್ರ್ಯೋತ್ಸವ

ಆಗಸ್ಟ್ ೧೫ರಂದು ಶ್ರೀಮಠದಲ್ಲಿ ೫೭ನೇ ಸ್ವಾತಂತ್ರ್ಯೋತ್ಸವವನ್ನು ಸಡಗರದಿಂದ ಆಚರಿಸಲಾಯಿತು. ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು. ಪೂಜ್ಯರು ತಮ್ಮ ಆಶೀರ್ವಚನದಲ್ಲಿ ''ಭರತಖಂಡಕ್ಕೆ ಪ್ರಾಚೀನ ಇತಿಹಾಸ ಇದೆ, ಸಾಂಸ್ಕೃತಿಕ ಪರಂಪರೆ ಇದೆ. ಎಲ್ಲಾ ರಾಷ್ಟ್ರಗಳು ಅಜ್ಞಾನದ ಅಂಧಕಾರದಲ್ಲಿ ಮುಳುಗಿದ್ದಾಗ ಭಾರತೀಯರು ಜ್ಞಾನದ ಬೆಳಕನ್ನು ಕಂಡಿದ್ದಾರೆ. ನಮ್ಮ ನಮ್ಮಲ್ಲಿಯ ಕಚ್ಚಾಟದಿಂದ ನಾವು ಸ್ವಾತಂತ್ರ್ಯವನ್ನು ಕಳೆದುಕೊಂಡೆವು. ವ್ಯಾಪಾರಕ್ಕಾಗಿ ಬಂದ ಈಸ್ಟ್ ಇಂಡಿಯಾ ಕಂಪನಿಯು ಮದ್ದುಗುಂಡುಗಳಿಂದ ಹೋರಾಟ ಮಾಡಿ ರಾಷ್ಟ್ರವನ್ನು ದಾಸ್ಯದ ಅಂಚಿಗೆ ದೂಡಿತು. ಭಾರತೀಯರ ಮೇಲೆ ದೌರ್ಜನ್ಯ-ದಬ್ಬಾಳಿಕೆ ಮಾಡಿದರು. ಅವರ ದಾಸ್ಯದಿಂದ ಬೇಸತ್ತ ಜನರಲ್ಲಿ ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ವಾತಾವರಣ ಮೂಡಿತು. ನಂತರ ಯುಗಪುರುಷ ಗಾಂಧೀಜಿಯವರ ನೇತೃತ್ವದಲ್ಲಿ ಶಾಂತಿ ಮತ್ತು ಅಹಿಂಸೆಯಿಂದ ಸ್ವಾತಂತ್ರ್ಯ ಪಡೆದಿದ್ದಾಯಿತು, ಆ ಸ್ವಾತಂತ್ರ್ಯವು ಅನೇಕ ಮಹಾತ್ಮರ ತ್ಯಾಗ ಬಲಿದಾನದಿಂದ ಲಭಿಸಿತು'' ಎಂದು ತಿಳಿಸಿದರು.



ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ವಿ. ಮುನಿಸ್ವಾಮಿ ಅವರಿಂದ ಧ್ವಜಾರೋಹಣ

''ಸ್ವಾತಂತ್ರ್ಯ ಎಂದರೆ ಸರ್ವರಿಗೂ ಸಮಬಾಳು- ಸಮಪಾಲು, ಎನ್ನುವಂತಾಗಬೇಕು. ಅದು ಫಲಕಾರಿಯಾಗಬೇಕಾದರೆ, ರಾಜ್ಯಾಂಗ-ಶಾಸಕಾಂಗ, ನ್ಯಾಯಾಂಗದಲ್ಲಿ ಅಧಿಕಾರ ಮಾಡುವವರು ಸೇವಾಮನೋಭಾವನೆಯಿಂದ ಕಾರ್ಯತತ್ಪರರಾಗಬೇಕು, ಇದಕ್ಕೆ ಬಸವಣ್ಣನವರ ಕಾಯಕತತ್ವ ಪರಿಹಾರವನ್ನು ಒದಗಿಸಬಲ್ಲದು. ಪ್ರತಿಯೊಬ್ಬರು ಶ್ರಮ ಜೀವನ ನಡೆಸಿ ಪ್ರಾಮಾಣಿಕ ವ್ಯಕ್ತಿತ್ವವುಳ್ಳವರಾಗಿ ಪ್ರೀತಿ, ಪ್ರೇಮದಿಂದ ಬಾಳಬೇಕು. ತಾಯಿ ಮತ್ತು ಶಿಕ್ಷಕರು ತಮ್ಮ ಸ್ಥಾನವನ್ನು ಅರಿತು ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸಬೇಕು. ವಿದ್ಯಾರ್ಥಿಗಳು ರಾಷ್ಟ್ರಭಕ್ತಿ ಉಳ್ಳವರಾಗಿ – ಚಾರಿತ್ರ್ಯವಂತರಾಗಿ ಕಷ್ಟಪಟ್ಟು ಅಧ್ಯಯನ ಮಾಡಿ ಯಶೋವಂತ



ಅಂಧ ಮಕ್ಕಳ ಪಥ ಸಂಚಲನ




ಪರಮಪೂಜ್ಯ ಶ್ರೀ ಶ್ರೀಗಳಿಂದ ಆಶೀರ್ವಚನ



ಪ್ರೌಢಶಾಲಾ ವಿದ್ಯಾರ್ಥಿಗಳಿಂದ ಪಥ ಸಂಚಲನ



ಸಮನ್ವಯ ಶಿಕ್ಷಣ ಕೇಂದ್ರದ ಮಕ್ಕಳಿಂದ ಸಾಂಸ್ಕೃತಿಕ ಕಾರ್ಯಕ್ರಮ

ರಾಗಬೇಕೆಂದು'' ತಮ್ಮ ಆಶೀರ್ವಚನದಲ್ಲಿ ತಿಳಿಸಿದರು.

ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ಸ್ವಾತಂತ್ರ್ಯದ ಸಂದೇಶ ನೀಡುತ್ತಾ, ''ಬ್ರಿಟೀಷರು ನಮ್ಮ ದೇಶಕ್ಕೆ ಆಗಮನವಾದಾಗ ನಮ್ಮಲ್ಲಿದ್ದ ದೇಶೀಯ ರಾಜರ ಅಸಹನೆ ದ್ವೇಷದಿಂದ ಇಡೀ ಭಾರತವನ್ನು ಆಕ್ರಮಣಮಾಡಿಕೊಂಡರು. ಒಂದು ಶತಮಾನಗಳ ಕಾಲ ಹೋರಾಟ ನಡೆಸಿ ಮಹಾತ್ಮಾಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯ ಪಡೆದವು. ಆದರೆ ಇಂದಿನ ಪರಿಸ್ಥಿತಿಯಲ್ಲಿ ಮುಕ್ತವಾಗಿ ಸ್ವಾತಂತ್ರ್ಯ ದಿನಾಚರಣೆ ಆಚರಿಸಲಾಗುತ್ತಿಲ್ಲ ಭಯೋತ್ಪಾದಕರ ಕಟ್ಟೆಚ್ಚರದಲ್ಲಿ ಆಚರಿಸ ಬೇಕಾಗಿದೆ. ಹಗಲು ರಾತ್ರಿಯೆನ್ನದೆ ಗಡಿಯಲ್ಲಿ ರಾಷ್ಟ್ರ ಸಂರಕ್ಷಣೆಗಾಗಿ ಕಂಕಣ ಬದ್ದರಾಗಿರುವ ಅವರಿಗೆ ನಾವೆಲ್ಲಾ ಕೃತಜ್ಞ ರಾಗಿರಬೇಕು. ಇಂದು ನಾವೆಲ್ಲಾ ಜಾತಿ-ಮತ-ಭೇದಭಾವ ಮರೆತು ಒಂದೇ ಎಂದು ಸಂಕಲ್ಪ ಮಾಡಬೇಕು'' ಎಂದು ನುಡಿದರು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾಧಿಕಾರಿ ಶ್ರೀ ಮಲ್ಲಿಕಾರ್ಜುನ ಬಿ. ದ್ಯಾಬೇರಿಯವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಸ್ವಾತಂತ್ರ್ಯ ನಂತರ ವಿಜ್ಞಾನದಲ್ಲಿ, ತಾಂತ್ರಿಕತೆ ಯಲ್ಲಿ ಆಗಿರುವ ಪ್ರಗತಿಯನ್ನು ವಿವರಿಸಿದರು.

ಧ್ವಜಾರೋಹಣಮಾಡಿ ವಂದನೆ ಸ್ವೀಕರಿಸಿದ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಪಿ. ಮುನಿಸ್ವಾಮಿಯವರು ಸ್ವಾತಂತ್ರ್ಯಪೂರ್ವದ ಸ್ಥಿತಿಗತಿಗಳನ್ನು ವಿವರಿಸಿದರು. ಶಾಲಾ ಮಕ್ಕಳಿಂದ ಸಾಮೂಹಿಕ ವಾಯಿತು, ಪಥಸಂಚಲನ, ವ್ಯಾಯಾಮ ಪ್ರದರ್ಶನ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.







ಟಿ.ಸಿ.ಎಚ್. ವಿದ್ಯಾರ್ಥಿನಿಯರಿಂದ ಸಾಂಸ್ಕೃತಿಕ ಕಾರ್ಯಕ್ರಮ



ಪ್ರೌಢಶಾಲಾ ವಿದ್ಯಾರ್ಥಿಗಳಿಂದ ಒಂದು ಪ್ರಹಸನ

ಕಾರ್ಯಕ್ರಮ ಶ್ರೀ ಪಿ.ಎಸ್. ಸಿದ್ಧಗಂಗಯ್ಯನವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು, ಶ್ರೀ ಜಿ.ಹೆಚ್. ಗಂಗಾಧರಯ್ಯ ಸ್ವಾಗತಿಸಿದರು. ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ವಂದನೆ ಸಲ್ಲಿಸಿದರು. ಶ್ರೀ ಡಿ.ಎಸ್. ನಾಗರಾಜು ಕಾರ್ಯಕ್ರಮ ನಿರೂಪಿಸಿದರು.

## ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನೆ




ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವ ಪ್ರೊ. ಬಿ.ಕೆ. ಚಂದ್ರಶೇಖರ್, ವಿಧಾನ ಪರಿಷತ್ ಸದಸ್ಯ ಶ್ರೀ ಎಸ್. ಚನ್ನಬಸವಯ್ಯ ಮೊದಲಾದವರು

ಸಚಿವ ಪ್ರೊ. ಬಿ.ಕೆ. ಚಂದ್ರಶೇಖರ್ ಅವರು ಪರಮಪೂಜ್ಯ ಶ್ರೀಗಳವರೊಂದಿಗೆ ವಿಚಾರ ವಿನಿಮಯ ನಡೆಸುತ್ತಿರುವುದು, ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು

ಶ್ರೀಮಠದಲ್ಲಿರುವ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ಪ್ರಸಕ್ತ ಸಾಲಿನ ಕಾರ್ಯಚಟುವಟಿಕೆಗಳ ಉದ್ಘಾಟನೆ ಆಗಸ್ಟ್ ೧೧ರಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಪರಮಪೂಜ್ಯರು ತಮ್ಮ ಆಶೀರ್ವಚನದಲ್ಲಿ

''ಭಾರತ ಜಗತ್ತಿನಲ್ಲಿ ಪ್ರಮುಖ ಸ್ಥಾನಗಳಿಸಿಕೊಂಡಿತ್ತು. ಇಂದು ವೈಜ್ಞಾನಿಕವಾಗಿ ನಾವು ಮಹತ್ತರ ಸಾಧನೆಯನ್ನು ಮಾಡಿದ್ದೇವೆ, ಜಗತ್ತು ಬಹಳ ಕಿರಿದಾಗಿದೆ. ಒಂದು ಗುಂಡಿಯನ್ನು ಒತ್ತಿದರೆ ಎಲ್ಲವೂ ನಾಶವಾಗುವ ಹಾಗೆ ಬೆಳೆದಿದೆ, ಇಷ್ಟೆಲ್ಲಾ ಸಾಧನೆ ಮಾಡಿದರೂ ಶಾಂತಿ ಇಲ್ಲಿ ಸಮಾಧಾನವಿಲ್ಲ, ಜಗತ್ತು ಇಂದು ಶಾಂತಿ-ಸಮಾಧಾನದ ನೆಮ್ಮದಿಯನ್ನು ಕಾಣಬೇಕಾದರೆ ಆ ಜವಾಬ್ದಾರಿಯನ್ನು ಭಾರತವೇ ಹೊರಬೇಕಾಗಿದೆ. ಜಗತ್ತಿಗೆ ಮೊದಲ ಶಾಂತಿ ಸಂದೇಶ ನೀಡಿದ ರಾಷ್ಟ್ರ ಭಾರತ'' ಎಂದು ತಿಳಿಸಿದರು.

''ಜಗತ್ತಿನ ಕಲ್ಯಾಣವಾಗಬೇಕಾದರೆ ಇಬ್ಬರು ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ಆ ಇಬ್ಬರು ಯಾರು ಅಂದರೆ ಒಬ್ಬರು ತಾಯಿ, ಮತ್ತೊಬ್ಬ ಶಿಕ್ಷಕ. ನಮ್ಮ ಸಂಸ್ಕೃತಿಯಲ್ಲಿ ಈ ಇಬ್ಬರಿಗೆ ಪೂಜ್ಯ ಸ್ಥಾನವಿದೆ. ಖಾಲಿ ಜನಾಂಗ ಉತ್ತಮ ಸಮಾಜ ನಿರ್ಮಾಣವಾಗಬೇಕಾದರೆ ಗಾಂಧೀಜಿ. ಹೇಳಿದ ಆದರ್ಶವಾದ ಶಿಸ್ತನ್ನು ಮೈಗೂಡಿಸಿಕೊಳ್ಳಬೇಕು'' ಎಂದು ಕರೆ ನೀಡಿದರು.

ಉದ್ಘಾಟನೆ ಮಾಡಿದ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರಾದ ಪ್ರೊ. ಬಿ.ಕೆ. ಚಂದ್ರಶೇಖರ್‌ರವರು ಮಾತನಾಡಿ ಶ್ರೀ ಮಠ ಜಾತಿ-ಮತ-ಭೇದ ವಿಲ್ಲದೆ ಎಲ್ಲಾ ವರ್ಗದವರಿಗೂ ವಿದ್ಯಾಭ್ಯಾಸದ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಾರೆ, ನೀವೆಲ್ಲಾ ರಾಜ್ಯದ ಮೂಲೆ ಮೂಲೆಯಿಂದ ಹಳ್ಳಿ ಹಳ್ಳಿಗಳಿಂದ ಬಂದಿದ್ದೀರಿ, ಎಷ್ಟೋ ಬಡಮಕ್ಕಳು ವಿದ್ಯೆಯಿಂದ ವಂಚಿತರಾಗುತ್ತಿದ್ದರು. ಈಗ ಸರ್ಕಾರ ''ಅಕ್ಷರ ದಾಸೋಹ'' ಕಾರ್ಯಕ್ರಮವನ್ನು ಪ್ರಾರಂಭಿಸಿದೆ. ಅದಕ್ಕೆ ಶ್ರೀಮಠವೇ ಸ್ಫೂರ್ತಿ, ಸಿದ್ದಗಂಗಾಮಠ ವಿಶ್ವವಿದ್ಯಾಲಯವಿದ್ದಂತೆ. ಇಲ್ಲಿ ಜ್ಞಾನದ ಜೊತೆಗೆ ನಮ್ಮ ದೇಶದ ಸಂಸ್ಕೃತಿ ಪರಂಪರೆಯನ್ನು ಬೆಳಸಲು ಅವಕಾಶವಿದೆ. ಇದನ್ನು ನೀವೆಲ್ಲಾ ಬಳಸಿಕೊಂಡು ಸತ್ಪ್ರಜೆಗಳಗಾಬೇಕು ಎಂದು ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ತುಮಕೂರು ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ಜಂಪಯ್ಯನವರು, ಶ್ರೀಮಠದಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳೆಲ್ಲಾ ಪುಣ್ಯವಂತರು. ಶ್ರೀಮಠವನ್ನು ನೋಡಿದರೆ ಹಿಂದಿನ ಗುರುಕುಲಗಳ ನೆನಪಾಗುತ್ತವೆ ಎಂದು ಶ್ರೀ ಮಠದ ಸೇವಾ ಕಾರ್ಯವನ್ನು ಮುಕ್ತ ಕಂಠದಿಂದ ಪ್ರಶಂಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ವಿಧಾನ ಪರಿಷತ್ ಸದಸ್ಯರಾದ, ಶ್ರೀ ಎಸ್. ಚೆನ್ನಬಸವಯ್ಯನವರು ಪರಮಪೂಜ್ಯರು ಶ್ರೀಮಠವನ್ನು ವಿಶ್ವಮಟ್ಟದಲ್ಲಿ ಬೆಳಗಿಸಿದ್ದಾರೆ, ತಾವೆಲ್ಲಾ ವಿದ್ಯಾರ್ಥಿ ಸಂಘದ ಉಪಯೋಗವನ್ನು ಪಡೆದುಕೊಳ್ಳಬೇಕು ಎಂದು ನುಡಿದರು. ಶ್ರೀ ಜಿ. ಗಂಗಾಧರಯ್ಯನವರು ಸ್ವಾಗತಿಸಿದರು. ಶ್ರೀ ಶಿವಕುಮಾರ್‌ರವರು ಅತಿಥಿಗಳನ್ನು ಪರಿಚಯಿಸಿದರು. ಶ್ರೀ ಜಿ. ಗವಿಸಿದ್ಧಯ್ಯನವರು ವಂದನಾರ್ಪಣೆ ಸಲ್ಲಿಸಿದರು. ಶ್ರೀ ಡಿ.ಎಸ್. ನಾಗರಾಜು ನಿರೂಪಿಸಿದರು.

ಈ ಕಾರ್ಯಕ್ರಮ ಸಂಜೆ ೬ ಗಂಟೆಗೆ ಎಂಟು ಸಾವಿರ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು.

ವರದಿ : ಡಿ.ಎಸ್. ನಾಗರಾಜು





ದಾಸೋಹ ನಿಲಯದಲ್ಲಿ ವಿದ್ಯಾರ್ಥಿಗಳಿಗೆ ಪ್ರಸಾದವನ್ನು ವಿತರಿಸುವ ವಿದ್ಯಾರ್ಥಿಗಳಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಬಟ್ಟೆಗಳನ್ನು ವಿತರಿಸುತ್ತಿರುವುದು

ತುಮಕೂರಿನಲ್ಲಿ ಇತ್ತೀಚೆಗೆ ನಡೆದ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಜನ್ಮ ಶತಮಾನೋತ್ಸವ ಕಾರ್ಯಕ್ರಮವನ್ನು ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು

# ಸುಂದರ ಭಾರತ ನಿರ್ಮಾಣ : ವಿದ್ಯಾರ್ಥಿಗಳಿಗೆ ರಾಷ್ಟ್ರಪತಿ ಕರೆ



''ಎಲ್ಲಾ ಧರ್ಮಗಳೂ ದ್ವೀಪಗಳಂತಾಗಿವೆ'' ಎಂದು ಹೇಳಿದ ರಾಷ್ಟ್ರಪತಿ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ಅವರು ವಿದ್ಯಾರ್ಥಿ ಯುವ ಜನರು ಈ ದ್ವೀಪಗಳನ್ನು ಪರಸ್ಪರ ಜೋಡಿಸಿ ಸುಂದರ ಭಾರತ ನಿರ್ಮಾಣಮಾಡಲು ಮುಂದಾಗಬೇಕು'' ಎಂದು ಕರೆ ನೀಡಿದರು.

ಅವರು ಆಗಸ್ಟ್ ೧ರಂದು ಉತ್ತರ ಪ್ರದೇಶದ ನೋಯಿಡಾದಲ್ಲಿ ನಿರ್ಮಿಸಿರುವ ಜೆ.ಎಸ್.ಎಸ್. ತಾಂತ್ರಿಕ ಶಿಕ್ಷಣ ಅಕಾಡೆಮಿಯ ಕಟ್ಟಡವನ್ನು ರಾಷ್ಟ್ರಕ್ಕೆ ಸಮರ್ಪಿಸಿ ಮಾತನಾಡುತ್ತಿದ್ದರು. ''ಪ್ರತಿ ಧರ್ಮಗಳೂ ಒಂದು ಸುಂದರ ತೋಟವಿದ್ದಂತೆ'' ಎಂದು ವ್ಯಾಖ್ಯಾನಿಸಿದ ರಾಷ್ಟ್ರಪತಿಗಳು ಪರಿಮಳಯುಕ್ತ ಹೂಗಳು, ರಸಭರಿತ ಹಣ್ಣು, ಕೇಕ್, ತಣಿಸುವ ಸೊಬಗಿನ ಮರಗಿಡಗಳು ಇವೆ. ಆದರೆ ಈ ಪ್ರತಿಯೊಂದು ಧರ್ಮಗಳೂ ದ್ವೀಪಗಳಾಗಿ ಮಾರ್ಪಟ್ಟಿವೆ. ಇವುಗಳನ್ನು ಪರಸ್ಪರ ಜೋಡಿಸಿದಾಗ ಸುಂದರವಾದ ಭಾರತವನ್ನು ನಿರ್ಮಿಸಲು ಸಾಧ್ಯವಾಗುತ್ತದೆ. ವಿದ್ಯಾರ್ಥಿ ಯುವಜನರು ಈ ಕೆಲಸ ನಿರ್ವಹಿಸಲು ಶಕ್ತರಾಗಿದ್ದಾರೆ'' ಎಂದು ಹೇಳಿದರು.

''ಮುಖ್ಯವಾಗಿ ಕೃಷಿ ಮತ್ತು ಆಹಾರ ಸಂಸ್ಕರಣೆ, ಶಿಕ್ಷಣ ಮತ್ತು ಆರೋಗ್ಯ, ಮಾಹಿತಿ ತಂತ್ರಜ್ಞಾನದ ಅಭಿವೃದ್ಧಿ ಮೂಲಭೂತ ಸೌಕರ್ಯಗಳ ಸಭಾಂಗಣ ಅಭಿವೃದ್ಧಿ, ನದಿಗಳ ಜೋಡಣೆ ಕ್ಷೇತ್ರದಲ್ಲಿ ನಾವು ಅಭಿವೃದ್ಧಿ ಸಾಧಿಸಬೇಕು. ದೇಶವನ್ನು ಮುಂದುವರೆಸುವ ನೈತಿಕ ನಾಯಕತ್ವವನ್ನು ಯುವಜನರು ಪಡೆಯಬೇಕು'' ಎಂದು ಅವರು ಆಶಿಸಿದರು.

ತಾಂತ್ರಿಕ ಶಿಕ್ಷಣ ಸೇರಿದಂತೆ ಎಲ್ಲಾ ಶಿಕ್ಷಣದಲ್ಲಿಯೂ ಮೌಲ್ಯಗಳ ಬಗ್ಗೆ ಎಚ್ಚರ ಅಗತ್ಯ ಎಂದು ಅಭಿಪ್ರಾಯಪಟ್ಟ ರಾಷ್ಟ್ರಪತಿ ಕಲಾಂ ಅವರು ಯುವ ಜನರಲ್ಲಿ ನೈತಿಕ ನಾಯಕತ್ವ ಬೆಳೆಸುವುದು ಅಗತ್ಯವಾಗಿದ್ದು ಈ ನಿಟ್ಟಿನಲ್ಲಿ ಪ್ರಯತ್ನಗಳು ನಡೆಯಬೇಕು ಎಂದು ಹೇಳಿದರಲ್ಲದೇ, ಜೆ.ಎಸ್.ಎಸ್. ಸಂಸ್ಥೆ ನಡೆಸಿರುವ ಪ್ರಯತ್ನಗಳನ್ನು ಶ್ಲಾಘಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಉತ್ತರ ಪ್ರದೇಶದ ರಾಜ್ಯಪಾಲರಾದ ಶ್ರೀ ವಿಷ್ಣುಕಾಂತ ಶಾಸ್ತ್ರಿ ಮಾತನಾಡಿ ೧೨ನೇ ಶತಮಾನದಲ್ಲಿ ಬಸವೇಶ್ವರರು ಸಮಾನತೆಯ ಸಮಾಜದ ಕನಸು ಕಂಡಿದ್ದರು. ವೀರಶೈವ ಮಠಗಳು ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆಯನ್ನು ಶ್ಲಾಘಿಸಿದರು. ಜೆ.ಎಸ್.ಎಸ್. ಸಂಸ್ಥೆಯು ಬಸವೇಶ್ವರರ ತತ್ವಗಳನ್ನು ಅನುಷ್ಠಾನಕ್ಕೆ ತರುತ್ತಾ ಮಾನವ ಜನಾಂಗದ ಒಳಿತಿಗೆ ದುಡಿಯುತ್ತಿದೆ ಎಂದರು.

ಸಮಾರಂಭದ ದಿವ್ಯಸಾನ್ನಿಧ್ಯವನ್ನು ತುಮಕೂರು ಸಿದ್ಧಗಂಗಾ ಮಠದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ವಹಿಸಿದ್ದರು.

ಸುತ್ತೂರು ಮಠಾಧೀಶರಾದ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು, ವಿಜಾಪುರ ಜ್ಞಾನ ಯೋಗಾಶ್ರಮದ ಶ್ರೀ ಸಿದ್ಧೇಶ್ವರಸ್ವಾಮಿಗಳು, ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ, ಕೇಂದ್ರ ಮಾಹಿತಿ ಮತ್ತು ತಂತ್ರಜ್ಞಾನ ಸಚಿವರಾದ ಶ್ರೀ ಅಶೋಕ್ ಪ್ರಧಾನ್, ಉತ್ತರ ಪ್ರದೇಶ ಸರ್ಕಾರದ ಸಚಿವರಾದ ಶ್ರೀ ವೇದರಾಂ ಭಾಟೀ, ಕೇಂದ್ರ ಮಂತ್ರಿಗಳಾದ ಶ್ರೀ ವಿ. ಶ್ರೀನಿವಾಸ ಪ್ರಸಾದ್, ಶ್ರೀ ಬಸನ ಗೌಡ ಆರ್. ಪಾಟೀಲ್ ಯತ್ನಾಳ್, ಶ್ರೀ ಜಾರ್ಜ್ ಫರ್ನಾಂಡಿಸ್, ಶ್ರೀ ನವಾಬ್ ಸಿಂಗ್ ನಗರ್, ಶ್ರೀ ಸಂಜಯ್ ಸಿಂಗ್ ಪಾಸ್ವಾನ್, ಶಾಸಕರಾದ ಶ್ರೀ ಎ.ಎಸ್. ಗುರುಸ್ವಾಮಿ, ಶ್ರೀ ಎಚ್.ಎಸ್. ಮಹಾದೇವ ಪ್ರಸಾದ್ ಇನ್ನಿತರರು ಉಪಸ್ಥಿತರಿದ್ದರು.

ಮೈಸೂರಿನಿಂದ ಆರಂಭವಾಗಿರುವ 'ಭಾರತ ದರ್ಶನ' ಯಾತ್ರೆಯಲ್ಲಿ ಭಾಗಿಗಳಾಗಿರುವ ಸಾವಿರಾರು ಯಾತ್ರಾರ್ಥಿಗಳು ಮತ್ತು ಕರ್ನಾಟಕ, ಆಂಧ್ರ ಮತ್ತು ತಮಿಳುನಾಡು ರಾಜ್ಯಗಳಿಂದ ಬಂದ ನೂರಾರು ಮಠಾಧೀಶರು ಸಮಾರಂಭದಲ್ಲಿ ಭಾಗವಹಿಸಿದ್ದರು.

ಜೆ.ಎಸ್.ಎಸ್. ಅಕಾಡೆಮಿ ಆಫ್ ಟೆಕ್ನಿಕಲ್ ಎಜುಕೇಷನ್ ಸಂಸ್ಥೆಯು ಗಜಿಯಾಬಾದ್ ಜಿಲ್ಲೆಗೆ ಸೇರಿದ ನೋಯಿಡಾದಲ್ಲಿ ಸುಮಾರು ೨೮ ಎಕರೆ ವಿಸ್ತೀರ್ಣ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿದೆ.

ಇದನ್ನು ಸುಮಾರು ೪೨.೫ ಕೋಟಿ ರೂ. ವೆಚ್ಚದಲ್ಲಿ ಅಭಿವೃದ್ಧಿಗೊಳಿಸಲಾಗಿದೆ.

★





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೯೧. | ಶ್ರೀ ಜಿ. ಚಿಕ್ಕಣ್ಣ<br>ಸಹ ಶಿಕ್ಷಕರು, | ೨,೦೦೧.೦೦ |
| ೯೯೨. | ಶ್ರೀ ಬಿ.ಆರ್. ಸೋಮಶೇಖರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೯೯೩. | ಶ್ರೀ ಜಿ. ಶಿವರುದ್ರಪ್ಪ<br>ದೈಹಿಕ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೯೯೧ ರಿಂದ ೯೯೩ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು<br>ಪ್ರೌಢಶಾಲಾ ವಿಭಾಗ, ಬಿ.ಹೆಚ್. ರಸ್ತೆ, ತುಮಕೂರು – ೨. | |
| ೯೯೪. | ಶ್ರೀ ಬಿ.ಎಸ್. ಸಿದ್ಧಲಿಂಗಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾಲ್ಲೂಕು. | ೨,೦೦೧.೦೦ |
| ೯೯೫. | ಶ್ರೀ ಎ. ಸಿದ್ಧರಾಮಣ್ಣ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾಲ್ಲೂಕು. | ೨,೦೦೧.೦೦ |
| ೯೯೬. | ಶ್ರೀ ಕೆ.ಎಸ್. ವಿಶ್ವೇಶ್ವರಯ್ಯ ಬಿನ್ ಸದಾಶಿವಯ್ಯ<br>ಕೊರಟಗೆರೆ,<br>(ಶ್ರೀ ಕಾಳಿದಾಸ ಪ್ರೌಢಶಾಲೆ ಹತ್ತಿರ)<br>ತುಮಕೂರು ಜಿಲ್ಲೆ. | ೧,೦೦೧.೦೦<br>(೧ನೇ ಕಂತು) |
| ೯೯೭. | ಶ್ರೀ ಹೆಚ್.ಎಸ್. ಷಡಕ್ಷರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೯೯೮. | ಶ್ರೀಮತಿ ಟ.ಬಿ. ಪುಷ್ಪಾ<br>ಸಹ ಶಿಕ್ಷಕರು | ೨,೦೦೧.೦೦ |
| ೯೯೯. | ಶ್ರೀಮತಿ ಬಿ. ಗಂಗಾಂಬಿಕ<br>ಸಹ ಶಿಕ್ಷಕರು | ೨೦೦೧.೦೦ |
| | ಕ್ರ.ಸಂ. ೯೯೭ ರಿಂದ ೯೯೯ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಪ್ರಾಕ್ಟಿಸಿಂಗ್ ಎಲಿಮೆಂಟರಿ ಶಾಲೆ<br>ಬಿ.ಹೆಚ್. ರಸ್ತೆ, ತುಮಕೂರು – ೨. | |
| ೧೦೦೦. | ಶ್ರೀರುದ್ರಗೌಡ ಶಿವನಗೌಡ ರಾಮನಗೌಡ<br>ಚಿಕ್ಕ ಉಲಿಗೆರೆ, ಹರೇ ಉಲಿಗೆರೆ ಅಂಚೆ,<br>ಸವದತ್ತಿ ತಾಲ್ಲೂಕು,<br>ಬೆಳಗಾಂ ಜಿಲ್ಲೆ. | ೨೦,೦೦೦.೦೦ |
| ೧೦೦೧. | ಶ್ರೀಮತಿ ಕೆ.ಜಿ. ಆಶಾ ಬಿನ್ ಗಂಗನರಸಯ್ಯ<br>ಕರೆಕಲ್‌ಪಾಳ್ಯ, ಕ್ಯಾತ್ಸಂದ್ರ ಅಂಚೆ,<br>ತುಮಕೂರು ತಾಲ್ಲೂಕು. | ೪,೦೦೦.೦೦ |
| ೧೦೦೨. | ಶ್ರೀ ಎಸ್.ಪಿ. ನಾಗೇಶ್ ಬಿನ್ ಪುಟ್ಟಸ್ವಾಮಯ್ಯ<br>ಸಂಗನಬಸವನದೊಡ್ಡಿ, ಮಾಯಗಾನಹಳ್ಳಿ ಅಂಚೆ,<br>ರಾಮನಗರಂ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೪,೦೦೦.೦೦ |
| ೧೦೦೩. | ಶ್ರೀ ಮರುಳಪ್ಪ ಎಸ್.ಎ. ಬಿನ್ ಅಪ್ಪಣ್ಣಪ್ಪ<br>ಸಂಕರಸನಹಳ್ಳಿ, ಸಕ್ಕರೆಗೊಲ್ಲಹಳ್ಳಿ ಅಂಚೆ,<br>ದೊಡ್ಡಬಳ್ಳಾಪುರ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೪,೦೦೦.೦೦ |
| ೧೦೦೪. | ಶ್ರೀ ಪ್ರದೀಪಕುಮಾರ್ ಬಿನ್ ಮಹದೇವಪ್ಪ<br>ತಡಿಮಾಲಂಗಿ ಮತ್ತು ಅಂಚೆ<br>ಟಿ. ನರಸೀಪುರ ತಾಲ್ಲೂಕು,<br>ಮೈಸೂರು ಜಿಲ್ಲೆ. | ೪,೦೦೦.೦೦ |
| ೧೦೦೫. | ಶ್ರೀ ಹೆಚ್. ದೇವರಾಜು ಬಿನ್ ಅರುವಣ್ಣ<br>ಬೆಟ್ಟಹಳ್ಳಿ ಮಠ ಮತ್ತು ಅಂಚೆ<br>ಕುಣಿಗಲ್ ತಾಲ್ಲೂಕು,<br>ತುಮಕೂರು ಜಿಲ್ಲೆ. | ೪,೦೦೦.೦೦ |
| ೧೦೦೬. | ಶ್ರೀಮತಿ ಹೆಚ್.ವಿ. ಲತಾಮಣಿ<br>ಬಿನ್ ಹೆಚ್.ಪಿ. ವರದರಾಜು<br>ಹಳೇಕೋಟೆ ಗ್ರಾಮ,<br>ಹೆಬ್ಬಾಲೆ ಅಂಚೆ, ಸೋಮವಾರಪೇಟೆ ತಾ.<br>ಕೊಡಗು ಜಿಲ್ಲೆ. | ೪,೦೦೦.೦೦ |
| ೧೦೦೭. | ಶ್ರೀ ಜಿ.ಆರ್. ಚಂದ್ರಶೇಖರಯ್ಯ<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೧೦೦೮. | ಶ್ರೀ ಶಿವರುದ್ರಪ್ಪ<br>ಮುಖ್ಯ ಶಿಕ್ಷಕರು,<br>ಶ್ರೀ ಮಂಜುನಾಥ ಬಾಲಕಿಯರ ಪ್ರೌಢಶಾಲೆ,<br>ನೆಲಮಂಗಲ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೧.೦೦ |
| ೧೧೦೯. | ಲಿ. ರುದ್ರಯ್ಯ – ಇವರ ಸ್ಮರಣಾರ್ಥ<br>ಶ್ರೀ ಎಂ.ಆರ್. ಬೈಲಪ್ಪ, ಶಿಕ್ಷಕರು,<br>ಡಾ. ಹೆಚ್. ನರಸಿಂಹಯ್ಯ ನ್ಯಾಷನಲ್ ಹೈಸ್ಕೂಲ್<br>ಹೊಸೂರು, ಗೌರೀಬಿದನೂರು ತಾಲ್ಲೂಕು,<br>ಕೋಲಾರ ಜಿಲ್ಲೆ. | ೫,೦೦೧.೦೦<br>(೪ನೇ ಕಂತು) |

*(ಮುಂದುವರಿಯುತ್ತದೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೫೮೯. | ಶ್ರೀ ಎಂ.ಜಿ. ವೆಂಕಟೇಶಯ್ಯ<br>ಬಿನ್ ಗಿರಿಯಪ್ಪ<br>ಮಾಚೇನಹಳ್ಳಿ, ತುರುವೇಕೆರೆ ತಾಲ್ಲೂಕು<br>ತುಮಕೂರು ಜಿಲ್ಲೆ. | ೧,೦೦೧.೦೦ |
| ೫೯೦. | ಶ್ರೀ ಹೆಚ್.ಎನ್. ಸದಾಶಿವಯ್ಯ<br>ಹುಲಿಕುಂಟೆ, ದೊಡ್ಡಬಳ್ಳಾಪುರ ತಾ.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೫೯೧. | ಶ್ರೀ ಎಂ. ಚನ್ನಬಸಪ್ಪ<br>ನಂ. ೨೧/೫೯-೧, ೧ನೇ ಮುಖ್ಯರಸ್ತೆ,<br>೫ನೇ ಕ್ರಾಸ್, ಬ್ಯಾಟರಾಯನಪುರ,<br>ಮೈಸೂರು ರಸ್ತೆ, ಬೆಂಗಳೂರು – ೨೬. | ೧,೦೦೧.೦೦ |
| ೫೯೨. | ಶ್ರೀ ಹೆಚ್.ಜಿ. ಗುರುಪ್ರಸಾದ<br>ಹೊಂಬೆಳಗು, ನಂ. ೧೧೧೫,<br>೧ನೇ ಕ್ರಾಸ್, ಲಲಿತಾದ್ರಿ ರಸ್ತೆ,<br>ಕುವೆಂಪು ನಗರ, ಮೈಸೂರು – ೨೩. | ೧,೦೦೦.೦೦<br>(೨ನೇ ಕಂತು) |
| ೫೯೩. | ಶ್ರೀ ಎಸ್. ಚಂದ್ರಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೯೪. | ಶ್ರೀ ಟಿ. ಶಿವನಂಜಪ್ಪ<br>ಪ್ರ.ಶಾ.ಸ. | ೧,೦೦೧.೦೦ |
| ೫೯೫. | ಶ್ರೀ ಎನ್. ತಿಮ್ಮಯ್ಯ<br>ಸೇವಕರು | ೧,೦೦೧.೦೦ |
| ೫೯೬. | ಶ್ರೀ ಕೆ. ಆರ್. ನಾಗರಾಜು<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೫೯೩ ರಿಂದ ೫೯೬ರವರೆಗಿನ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | |
| ೫೯೭. | ಶ್ರೀ ಬಿ. ಚಂದ್ರಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೫೯೮. | ಶ್ರೀಮತಿ ಶಾಲಿನಿ ಬಸವಂತ ರಾವಳ<br>ಹಿಂದಿ ಶಿಕ್ಷಕರು | ೧,೦೦೧.೦೦ |
| ೫೯೯. | ಶ್ರೀ ಸಿ.ಎಸ್. ಜಯಶಂಕರ<br>ಸಹ ಶಿಕ್ಷಕರು | ೧,೦೦೧.೦೦ |
| ೬೦೦. | ಶ್ರೀ ಗುರುಮೂರ್ತಿ<br>ಕನ್ನಡ ಪಂಡಿತರು | ೧,೦೦೧.೦೦ |
| ೬೦೧. | ಶ್ರೀ ಬಿ.ಎಸ್. ಶಿವಕುಮಾರ್<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೫೯೭ ರಿಂದ ೬೦೧ರವರೆಗಿನ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ನಾರಸಂದ್ರ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೬೦೨. | ಶ್ರೀ ಎನ್.ಜಿ. ಬಸವರಾಜಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಆದಲಗೆರೆ, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೦.೦೦ |
| ೬೦೩. | ಶ್ರೀ ಚಿಕ್ಕಹನುಮಯ್ಯ<br>ಸಹ ಶಿಕ್ಷಕರು | ೫೦೧.೦೦<br>(೧ನೇ ಕಂತು) |
| ೬೦೪. | ಶ್ರೀ ಕೆ.ಎನ್. ಮುತ್ತಹನುಮಯ್ಯ<br>ಸಹ ಶಿಕ್ಷಕರು | ೫೦೧.೦೦<br>(೧ನೇ ಕಂತು) |
| ೬೦೫. | ಶ್ರೀ ಟಿ. ವೆಂಕಟಪ್ಪ<br>ಸಹ ಶಿಕ್ಷಕರು | ೫೦೧.೦೦<br>(೧ನೇ ಕಂತು) |
| ೬೦೬. | ಶ್ರೀ ಎನ್. ಪ್ರಭಾಕರ್<br>ಸಹ ಶಿಕ್ಷಕರು | ೫೦೧.೦೦<br>(೧ನೇ ಕಂತು) |
| ೬೦೭. | ಶ್ರೀ ಎಂ. ಪ್ರಭುದೇವರು<br>ಸಹ ಶಿಕ್ಷಕರು | ೫೦೧.೦೦<br>(೧ನೇ ಕಂತು) |
| ೬೦೮. | ಶ್ರೀಮತಿ ಕೆ.ಆರ್. ಚಂದ್ರಿಕಾ<br>ಸಹ ಶಿಕ್ಷಕರು | ೫೦೧.೦೦<br>(೧ನೇ ಕಂತು) |
| ೬೦೯. | ಶ್ರೀ ಬಿ. ನಾಗೇಶ್<br>ಸಹ ಶಿಕ್ಷಕರು | ೧೦೦೧.೦೦<br>(೧ನೇ ಕಂತು) |
| ೬೧೦. | ಶ್ರೀ ವಿ.ಪಿ. ಸದಾಶಿವಯ್ಯ<br>ದೈಹಿಕ ಶಿಕ್ಷಕರು | ೫೦೧.೦೦<br>(೧ನೇ ಕಂತು) |
| ೬೧೧. | ಶ್ರೀ ಅಪ್ಪಯ್ಯ ಶೆಟ್ಟಿ<br>ಗ್ರ.ಪಾ. | ೫೦೧.೦೦<br>(೧ನೇ ಕಂತು) |
| ೬೧೨. | ಶ್ರೀ ಕೆ. ನಾರಾಯಣಸ್ವಾಮಿ<br>ಪ್ರ.ಶಾ.ಸ. | ೫೦೧.೦೦<br>(೧ನೇ ಕಂತು) |
| ೬೧೩. | ಶ್ರೀ ಜಿ. ನಾರಾಯಣಪ್ಪ<br>ಸೇವಕರು | ೫೦೧.೦೦<br>(೧ನೇ ಕಂತು) |
| | ಕ್ರ.ಸಂ. ೬೦೩ ರಿಂದ ೬೧೩ರವರೆಗಿನ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಗುಡೇಮಾರನಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾ. ಜಿಲ್ಲೆ | |

*(ಮುಂದುವರಿಯುತ್ತದೆ)*




ನೊಯಿಡಾದಲ್ಲಿ ನಡೆದ ಜೆಎಸ್‌ಎಸ್ ತಾಂತ್ರಿಕ ಶಿಕ್ಷಣ ಅಕಾಡೆಮಿ ಕಟ್ಟಡ ಸಂಕೀರ್ಣದ ಸಮರ್ಪಣೆ ಸಮಾರಂಭದಲ್ಲಿ ಪೂಜ್ಯ ಶ್ರೀ ಸಿದ್ದೇಶ್ವರ ಮಹಾಸ್ವಾಮಿಗಳು, ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಪೂಜ್ಯ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು, ರಾಷ್ಟ್ರಪತಿ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ, ಉತ್ತರ ಪ್ರದೇಶದ ರಾಜ್ಯಪಾಲ ಶ್ರೀ ವಿಷ್ಣುಕಾಂತ ಶಾಸ್ತ್ರಿ ಕೇಂದ್ರ ರಕ್ಷಣಾ ಸಚಿವ ಶ್ರೀ ಜಾರ್ಜ್ ಫರ್ನಾಂಡೀಸ್ ಹಾಗೂ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು



ಶ್ರೀಮಠದಲ್ಲಿ ಆಗಸ್ಟ್ ೧೨ರಂದು ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವ ಪ್ರೊ. ಡಿ.ಕೆ. ಚಂದ್ರಶೇಖರ್ ಅವರು ಪರಮಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಸಂಯುಕ್ತ ವಿದ್ಯಾರ್ಥಿ ಸಂಘದ ಶೈಕ್ಷಣಿಕ ವರ್ಷದ ಕಾರ್ಯಕ್ರಮಗಳನ್ನು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ವಿಧಾನಪರಿಷತ್ ಸದಸ್ಯ ಶ್ರೀ ಎಸ್. ಚನ್ನಬಸವಯ್ಯ ಮೊದಲಾದವರು ಉಪಸ್ಥಿತರಿದ್ದರು.